# ಅನಾಸಕ್ತಿಯೋಗ



(ಶ್ರೀಮದ್ಭಗವದ್ಗೀತೆಯ ಅನುವಾದ)

ಮೂಲ ಸಂಸ್ಕೃತ ಶ್ಲೋಕಗಳೊಡನೆ

ಗಾಂಧೀಜೀ

ಕರ್ಣಾಟಕ ಸಾಹಿತ್ಯ ಪ್ರಕಟನ ಮಂದಿರ
ಬೆಂಗಳೂರು ನಗರ

೧೯೩೦

# ಅನುವಾದಕರ ಬಿನ್ನಹ

ಪೂಜ್ಯ ಗಾಂಧೀಜಿಯವರು ತಮ್ಮ ಆರೋಗ್ಯದ ಸಲುವಾಗಿ ಬೆಂಗಳೂರಿಗೆ ಬಂದಾಗಲೇ ಭಗವದ್ಗೀತೆಯ ಗುಜರಾತೀ ಭಾಷಾಂತರವನ್ನಾರಂಭಿಸಿದ್ದರು. ಈ ಪುಸ್ತಕದ ಕೊನೆಯಲ್ಲಿರುವ ಹಿನ್ನುಡಿಯಲ್ಲಿ ಅವರು ಹೇಳಿರುವಂತೆ ಅದು ಈ ವರ್ಷ ಪ್ರಕಟವಾಯಿತು. ಆಮೇಲೆ ಅದರ ಹಿಂದೀ ಅನುವಾದವು ಪ್ರಕಟವಾಯಿತು. ಈ ಪುಸ್ತಕವು ಹಿಂದೀ ಅನುವಾದದ ಅನುವಾದ.

ಹೀಗೆ ಇದು ಮೂಲಕ್ಕೆ ಮೂರು ಮೆಟ್ಟಲಾಚೆಯಿದ್ದರೂ ಗಾಂಧೀಜಿಯವರ ಮನೋಗತವನ್ನು ಕನ್ನಡದಲ್ಲ ಸ್ಪಷ್ಟಪಡಿಸಲು ನಮ್ಮ ಕೈಲಾದಮಟ್ಟಿಗೆ ಪ್ರಯತ್ನಪಟ್ಟಿದ್ದೇವೆ. ಸಾಧ್ಯವಾದ ಮಟ್ಟಿಗೂ ಅವರ ಪದಗಳೇ ಉಪಯೋಗಿಸಲ್ಪಟ್ಟಿವೆ. ಕೆಲವೆಡೆ ಮೂಲದ ಅರ್ಥವನ್ನು ಕನ್ನಡದಲ್ಲಿ ಸಂಪೂರ್ಣವಾಗಿ ತರಲು ಮೂಲದಲ್ಲಿಲ್ಲದ ಶಬ್ದಗಳನ್ನುಪಯೋಗಿಸಬೇಕಾಗಿ ಬಂದಿದೆ. ಅಂತಹ ಶಬ್ದಗಳೆಲ್ಲಾ ಚೌಕ ಕಂಸ [ ] ದಲ್ಲಿ ಕಾಣಬರುತ್ತವೆ. ದುಂಡು ( ) ಕಂಸಗಳು ಮೂಲದಲ್ಲಿಯೂ ಇವೆ.

ಗಾಂಧೀಜಿಯವರು ಉದ್ದೇಶಪೂರ್ವಕವಾಗಿ ಗುಜರಾತಿ ಮತ್ತು ಹಿಂದೀ ಸಂಸ್ಕರಣಗಳಲ್ಲಿ ಮೂಲ ಸಂಸ್ಕೃತ ಶ್ಲೋಕಗಳನ್ನು ಕೊಡದಿರುವಾಗ ಈ ಪುಸ್ತಕದಲ್ಲಿ ಕೊಟ್ಟಿರುವುದೇಕೆಂದು ಕೇಳಬಹುದು. ಕನ್ನಡದಲ್ಲಿ ತಪ್ಪಿಲ್ಲದೆ ಅಚ್ಚಾಗಿರುವ ಶ್ಲೋಕಗಳನ್ನುಳ್ಳ ಗೀತೆಯ ಪ್ರತಿಯು ಸುಲಭ ಬೆಲೆಗೆ ದೊರೆಕುವದಿಲ್ಲ. ಮೂಲ ಶ್ಲೋಕಗಳಿಲ್ಲದೆ ಈ ಪುಸ್ತಕವು ನಿತ್ಯಪಠನೆಗೆ ಅನುಕೂಲವಾಗಿರುವದಿಲ್ಲ. ಆದುದರಿಂದ ಮೂಲ ಶ್ಲೋಕಗಳನ್ನೂ ಇದರಲ್ಲಿ ಕೊಟ್ಟಿದೆ. ಇದರಿಂದ ಈ ಪುಸ್ತಕದ ಗಾತ್ರವೂ ಬೆಲೆಯೂ ಹೆಚ್ಚಿದರೂ ಕನ್ನಡಿಗರಿಗೆ ಒಟ್ಟಿನಲ್ಲಿ ಉಪಯೋಗವು ಹೆಚ್ಚಿರುವದೆಂದು ನಾವು ಆಸಿಸುತ್ತೇವೆ.

ಗಾಂಧೀಜಿಯವರ ಈ ಪುಸ್ತಕದ ಕನ್ನಡ ಭಾಷಾಂತರವೊಂದು ಆಗಲೇ ಪ್ರಕಟವಾಗಿದೆ. ಇನ್ನೊಂದು ಇಷ್ಟರಲ್ಲಿಯೇ ಹೊರಬೀಳುವ ದೆಂದು ನಾವು ಕೇಳುತ್ತೇವೆ. ಅವೆರಡರ ಜೊತೆಗೆ ಇದನ್ನೂ ಕನ್ನಡಿಗರ ಮುಂದಿಟ್ಟು ಗಾಂಧೀಸಾಹಿತ್ಯವು ಅವರಿಗೆ ದೊರೆಯುವಂತೆ ಮಾಡಲು ನಾವು ಕೈಗೊಂಡಿರುವ ನಮ್ರ ಪ್ರಯತ್ನದಲ್ಲಿ ಎಂದಿನಂತೆಯೇ ಇಂದೂ ಅವರ ಆಶೀರ್ವಾದವನ್ನು ಕೋರುತ್ತೇವೆ.

ಗೀತಾಜಯಂತಿ — ಕನ್ನಡಿಗರಿಬ್ಬರು

ಪ್ರಮೋದ ಸಂ. ಮಾರ್ಗಶಿರ ಶು. ೧೧.

# ವಿಷಯಾನುಕ್ರಮಣಿಕೆ.

—:✦:—

# ಪ್ರಸ್ತಾವನೆ



ಸ್ವಾಮಿ ಆನಂದರೇ ಮುಂತಾದ ಮಿತ್ರರ ಪ್ರೇಮಕ್ಕೆ ವಶನಾಗಿ ನಾನು ಸತ್ಯದ ಶೋಧನೆಗಳನ್ನು ವರ್ಣಿಸುವ ಮಟ್ಟಿಗೆ ಮಾತ್ರ ನನ್ನ ಆತ್ಮಕಥೆಯನ್ನು ಬರೆಯಲುದ್ಯುಕ್ತನಾದೆನು. ಶ್ರೀಮದ್ಭಗವದ್ಗೀತೆಯ ಅನುವಾದದ ಸಂಬಂಧವಾಗಿ ಕೂಡ ಹಾಗೆಯೇ ನಡೆದಿದೆ. “ತಾವು ಗೀತೆಯನ್ನು ಸಂಪೂರ್ಣವಾಗಿ ಭಾಷಾಂತರಿಸಿ, ಅದರ ಮೇಲೆ ಮಾಡಲಿರುವ ಟೀಕೆಯನ್ನು ಮಾಡಿ, ನಾವು ಅದೆಲ್ಲವನ್ನೂ ಒಂದು ಬಾರಿ ಪಠಿಸಿದಮೇಲೆಯೇ ತಾವು ಗೀತೆಗೆ ಮಾಡುವ ಅರ್ಥವು ನಮಗೆ ಚೆನ್ನಾಗಿ ಮನಗಾಣುವದು. ಅಲ್ಲೊಂದು ಇಲ್ಲೊಂದು ಶ್ಲೋಕವನ್ನಾರಿಸಿ ಅಹಿಂಸಾದಿ ತತ್ವಗಳನ್ನು ಪ್ರತಿಪಾದಿಸುವದು ನನಗೇಕೋ ಉಚಿತವೆಂದು ತೋರುವದಿಲ್ಲ.” ಎಂಬದಾಗಿ ಸ್ವಾಮಿ ಆನಂದರು ಅಸಹಯೋಗದ ಕಾಲದಲ್ಲಿ ನನಗೆ ಹೇಳಿದ್ದರು. ಅವರ ಈ ವಾದದಲ್ಲಿ ಸಾರವಿರುವಂತೆ ನನಗೆ ಕಂಡಿತು. ನಾನು “ಅವಕಾಶ ದೊರೆತಾಗ ಈ ಕೆಲಸವನ್ನು ಮಾಡುವೆನು” ಎಂದು ಉತ್ತರವಿತ್ತೆನು. ಆಮೇಲೆ ನಾನು ಸೆರೆಮನೆಗೆ ಹೋದೆನು. ಅಲ್ಲಿ ನನಗೆ ಗೀತೆಯನ್ನು ಏಕಾಗ್ರತೆಯಿಂದ ಅಧ್ಯಯಿಸಲು ಅವಕಾಶವೊದಗಿತು. ಲೋಕಮಾನ್ಯರ ಜ್ಞಾನಭಂಡಾರ೧ ವನ್ನು ಓದಿದೆನು.

---

೧ ಲೋಕಮಾನ್ಯ ಬಾಲಗಂಗಾಧರ ತಿಲಕರು ಬರೆದಿರುವ ‘ಗೀತಾರಹಸ್ಯ’. ಇದು ಶ್ರೀ ವೆಂ. ಭೀ. ಆಲೂರರಿಂದ ಕನ್ನಡಕ್ಕೆ ಪರಿವರ್ತಿತವಾಗಿದೆ.

ಅವರು ನನಗೆ ಮೊದಲೇ ಮರಾಠಿ, ಹಿಂದಿ ಮತ್ತು ಗುಜರಾತಿ ಭಾಷಾಂತರಗಳನ್ನು ಪ್ರೇಮಪೂರ್ವಕವಾಗಿ ಕಳಿಸಿ ಮರಾಠಿ ಪುಸ್ತಕವನ್ನು ಓದಲಾಗದಿದ್ದರೆ ಗುಜರಾತಿಯನ್ನಂತು ಅವಶ್ಯವಾಗಿ ಓದಲೆಂದು ಅನುರೋಧಮಾಡಿದ್ದರು. ಜೈಲಿನ ಹೊರಗಂತು ಅವನ್ನು ಓದಲಾಗಲಿಲ್ಲ. ಆದರೆ ಜೈಲಿನೊಳಗೆ ಗುಜರಾತಿ ಅನುವಾದವನ್ನು ಓದಿದೆನು. ಇದನ್ನು ಓದಿದಮೇಲೆ ಗೀತಾಸಂಬಂಧವಾಗಿ ಇನ್ನೂ ಹೆಚ್ಚು ಓದಬೇಕೆಂಬ ಇಚ್ಛೆಯುಂಟಾಗಿ ಗೀತೆಯನ್ನು ಕುರಿತ ಅನೇಕ ಪುಸ್ತಕಗಳನ್ನು ತಿರುವಿಹಾಕಿದೆನು.

ನನಗೆ ಗೀತೆಯ ಪ್ರಥಮ ಪರಿಚಯವು ಎಡ್ವಿನ್ ಅರ್ನಾಲ್ಡರ ಪದ್ಯ ಅನುವಾದದಿಂದ ಸನ್ ೧೮೮೮-೮೯ರಲ್ಲಿ ಉಂಟಾಯಿತು. ೧

ಅದರಿಂದ ಗೀತೆಯ ಗುಜರಾತಿ ಅನುವಾದವನ್ನು ಓದಲು ತೀವ್ರ ಇಚ್ಛೆಯುದಿಸಿತು. ಕೈಗೆ ಸಿಕ್ಕಿದ ಅನುವಾದಗಳನ್ನೆಲ್ಲಾ ಓದಿಬಿಟ್ಟೆನು. ಆದರೆ ಈ ರೀತಿಯ ಪಠನವು ನನ್ನ ಅನುವಾದವನ್ನು ಜನತೆಯ ಮುಂದಿಡಲು ನನಗೆ ಎಳ್ಳಷ್ಟೂ ಅಧಿಕಾರವನ್ನು ಕೊಡುವದಿಲ್ಲ. ಎರಡನೆಯದಾಗಿ ನನ್ನ ಸಂಸ್ಕೃತ ಜ್ಞಾನವು ಅಲ್ಪ; ಗುಜರಾತಿಯ ಜ್ಞಾನವು ಪಾಂಡಿತ್ಯದ ದೃಷ್ಟಿಯಿಂದ ಎಣಿಸತಕ್ಕದೇ ಅಲ್ಲ. ಹಾಗಾದರೆ ನನಗೆ ಅನುವಾದ ಮಾಡುವ ಧಾರ್ಷ್ಟ್ಯವೇಕೆ ?

ಗೀತೆಯನ್ನು ನಾನು ಹೇಗೆ ಅರ್ಥಮಾಡಿಕೊಂಡಿರುವೆನೋ ಅದೇ ರೀತಿಯಲ್ಲಿಯೇ ಅದರ ಆಚರಣೆಯನ್ನು ಮಾಡುವದು ನನ್ನ ಮತ್ತು ನನ್ನೊಡನೆ ವಾಸಿಸುವ ಕೆಲವು ಸಂಗಡಿಗರ ಸಂತತ ಉದ್ಯೋಗವಾಗಿದೆ. ಗೀತೆಯು ನನ್ನ ದೃಷ್ಟಿಯಲ್ಲಿ ಆಧ್ಯಾತ್ಮಿಕ ನಿದಾನಗ್ರಂಥವಾಗಿದೆ. ಅದನ್ನನುಸರಿಸಿ ಆಚರಣೆಗೈವುದರಲ್ಲಿ ನಿಷ್ಫಲತೆಯು ನಿತ್ಯವೂ ಒದಗುತ್ತದೆ. ಆದರೆ ಈ ನಿಷ್ಫಲತೆಯು ನಮ್ಮ ಪ್ರಯ

---

೧ ಸತ್ಯಶೋಧನೆ, ಭಾಗ ೧ (ದ್ವಿತೀಯ ಮುದ್ರಣ), ೨೦ನೆಯ ಅಧ್ಯಾಯವನ್ನು ನೋಡಿ.

ತ್ನವು ನಿರಂತರವಾಗಿ ನಡೆಯುತ್ತಿದ್ದರೂ ಒದಗಿದೆಯೇ ಹೊರತು ಬೇರೆ ಅಲ್ಲ. ಈ ನಿಷ್ಫಲತೆಯಲ್ಲಿ ನಮಗೆ ಸಫಲತೆಯ ಉದಯಕಿರಣದ ಪ್ರಕಾಶವು ಕಣ್ಣಿಗೆ ಬೀಳುತ್ತದೆ. ಈ ಸಣ್ಣ ಜನಸಮುದಾಯವು ಯಾವ ಅರ್ಥವನ್ನು ಕಾರ್ಯರೂಪದಲ್ಲಿ ಪರಿಣತಿಗೊಳಿಸಲು ಪ್ರಯತ್ನಪಡುತ್ತಿದೆಯೊ ಆ ಅರ್ಥವು ಈ ಅನುವಾದದಲ್ಲಿದೆ.

ಇದಲ್ಲದೆ ಹೆಂಗಸರು, ವೈಶ್ಯರು ಮತ್ತು ಶೂದ್ರರು ಇವರಂತಹ ಅಕ್ಷರಜ್ಞಾನವನ್ನು ಅಲ್ಪವಾಗಿ ಪಡೆದಿರುವ ಮಂದಿಗೆ—ಯಾರಿಗೆ ಮೂಲ ಸಂಸ್ಕೃತದಲ್ಲಿ ಗೀತೆಯನ್ನು ತಿಳಿದುಕೊಳ್ಳಲು ಸಮಯವಿಲ್ಲವೊ, ಇಚ್ಛೆಯಿಲ್ಲವೊ, ಆದರೆ ಯಾರಿಗೆ ಗೀತಾರೂಪಿಯಾದ ಆಧಾರದ ಆವಶ್ಯಕತೆಯುಂಟೊ ಅಂತಹರಿಗಾಗಿಯೇ — ಈ ಅನುವಾದವು ರಚಿತವಾಗಿರುತ್ತದೆ ನನಗೆ ಗುಜರಾತಿಯ ಭಾಷೆಯ ಜ್ಞಾನವು ಕಡಿಮೆಯದಾಗಿದ್ದಾಗ್ಯೂ ನನಗೆ ಇರುವ ಅಲ್ಪಸ್ವಲ್ಪ ಬಂಡವಾಳವನ್ನು ಅವರ ಮೂಲಕ ಗುಜರಾತಿಗಳಿಗೆ ಕೊಟ್ಟುಬಿಡಲು ನನಗೆ ಸದಾ ಮಹದಭಿಲಾಷೆಯು ಇದ್ದೇ ಇದೆ. ದುಷ್ಟಸಾಹಿತ್ಯವು ರಭಸದಿಂದ ಪ್ರವಹಿಸುತ್ತಿರುವ ಈ ಕಾಲದಲ್ಲಿ ಹಿಂದೂಧರ್ಮದಲ್ಲಿ ಅದ್ವಿತೀಯವೆಂದೆಣಿಸಿರುವ ಈ ಗ್ರಂಥದ ಸರಳ ಅನುವಾದವು ಗುಜರಾತಿ ಜನರಿಗೆ ದೊರಕಲಿ ಮತ್ತು ಅದರಿಂದ ಅವರು ಆ ಪ್ರವಾಹವನ್ನು ಇದಿರಿಸುವ ಶಕ್ತಿಯನ್ನು ಪಡೆಯಲಿ ಎಂದು ನಾನು ಅವಶ್ಯವಾಗಿ ಇಚ್ಛಿಸುತ್ತೇನೆ.

ಈ ಅಭಿಲಾಷೆಯಲ್ಲಿ ಇತರ ಗುಜರಾತಿ ಅನುವಾದಗಳ ಅವಹೇಳನವೇನೂ ಇಲ್ಲ. ಅವುಗಳಲ್ಲಿ ಪ್ರತಿಯೊಂದಕ್ಕೂ ತನ್ನ ಸ್ಥಾನವಿದ್ದರೂ ಅವುಗಳಿಗೆ ಬೆಂಬಲವಾಗಿ ಅನುವಾದಕರ ಆಚಾರರೂಪ ಅನುಭವವು ಉಂಟೋ ಇಲ್ಲವೋ ನನಗೆ ತಿಳಿಯದು. ಈ ಅನುವಾದವು ಮೂವತ್ತೆಂಟು ವರ್ಷಗಳ ಆಚಾರಪ್ರಯತ್ನದ ಆಧಾರವುಳ್ಳದಾಗಿದೆ. ಈ ಕಾರಣದಿಂದ ಧರ್ಮವನ್ನು ಆಚರಣೆಗೆ ತರಬೇಕೆಂಬ ಇಚ್ಛೆಯುಳ್ಳ ಪ್ರತಿಯೊಬ್ಬ ಗುಜರಾತಿ ಸಹೋದರನೂ ಸಹೋದರಿಯೂ ಇದನ್ನು ಓದಿ ವಿಚಾರಮಾಡಿ ಇದರಿಂದ ಶಕ್ತಿಯನ್ನು ಹೊಂದಲೆಂದು ನನಗೆ ತೀವ್ರವಾದ ಆಸೆಯಿದೆ.

ಈ ಅನುವಾದದಲ್ಲಿ ನನ್ನ ಸಂಗಡಿಗರ ಪರಿಶ್ರಮವೂ ಸೇರಿದೆ. ನನ್ನ ಸಂಸ್ಕೃತಜ್ಞಾನವು ಬಹು ಅಪೂರ್ಣವಾಗಿರುವ ಕಾರಣ ಶಬ್ದಾರ್ಥದ ವಿಷಯದಲ್ಲಿ ನನಗೆ ಹೆಚ್ಚು ಭರವಸೆಯಿಲ್ಲವೆಂಬ ದೃಷ್ಟಿಯಿಂದ ವಿನೋಬಾ, ಕಾಕಾ ಕಾಲೇಲಕರ್, ಮಹಾದೇವ ದೇಶಾಯಿ ಮತ್ತು ಕಿಶೋರಲಾಲ ಮಶರೂವಾಲಾ, ಇವರುಗಳು ಈ ಅನುವಾದವನ್ನು ಪರಿಶೀಲಿಸಿದ್ದಾರೆ.

೨

ಇನ್ನು ಗೀತೆಯ ಅರ್ಥಕ್ಕೆ ಬರೋಣ.

ಸನ್ ೧೮೮೮-೮೯ರಲ್ಲಿ ನಾನು ಗೀತೆಯನ್ನು ಮೊಟ್ಟಮೊದಲು ಓದಿದಾಗಲೇ 'ಇದು ಐತಿಹಾಸಿಕ ಗ್ರಂಥವಲ್ಲ; ಇದರಲ್ಲಿರುವದು ಭೌತಿಕಯುದ್ಧದ ವರ್ಣನೆಯ ವ್ಯಾಜದಿಂದ ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ನಿರಂತರವೂ ನಡೆಯುತ್ತಿರುವ ದ್ವಂದ್ವ ಯುದ್ಧದ ವರ್ಣನೆಯೇ. ಮಾನುಷೀ ಯೋದ್ಧರ ರಚನೆಯು ಹೃದಯಗತ ಯುದ್ಧವನ್ನು ಮನೋರಂಜಕವಾಗಿ ಮಾಡಲೆಸಗಿದ ಕಲ್ಪನೆಯ ರೂಪದಲ್ಲಿದೆ.' ಎಂದು ನನ್ನ ಮನಸ್ಸಿಗೆ ತೋರಿತು. ಈ ಪ್ರಥಮ ಸ್ಫುರಣೆಯು ಧರ್ಮದ ಮತ್ತು ಗೀತೆಯ ವಿಷಯದಲ್ಲಿ ವಿಶೇಷ ವಿಚಾರ ಮಾಡಿದ ಮೇಲೆ ಪಕ್ವರೂಪವನ್ನು ಹೊಂದಿತು. ಮಹಾಭಾರತವನ್ನೋದಿದನಂತರ ಮೇಲೆ ಹೇಳಿದ ಅಂಶವು ಇನ್ನೂ ದೃಢವಾಯಿತು. ನಾನು ಮಹಾಭಾರತವನ್ನು ಇಂದಿನ ಅರ್ಥದ ದೃಷ್ಟಿಯಿಂದ ಐತಿಹಾಸಿಕ ಗ್ರಂಥವೆಂದೆಣಿಸುವದಿಲ್ಲ. ಇದಕ್ಕೆ ಪ್ರಬಲಪ್ರಮಾಣಗಳು ಆದಿಪರ್ವದಲ್ಲಿಯೇ ಇವೆ. ಕಥಾಪಾತ್ರಗಳ ಅಮಾನುಷ ಉತ್ಪತ್ತಿಯನ್ನು ವರ್ಣಿಸಿ ವ್ಯಾಸಭಗವಾನರು ರಾಜಾಪ್ರಜಾ ಇತಿಹಾಸಕ್ಕೆ ತಿಲತರ್ಪಣಕೊಟ್ಟಿದ್ದಾರೆ. ಅದರಲ್ಲಿ ವರ್ಣಿತವಾಗಿರುವ ಪಾತ್ರಗಳು ಮೂಲತಃ ಐತಿಹಾಸಿಕವಾಗಿದ್ದರೂ ಇದ್ದಿರಬಹುದು; ಆದರೆ ಮಹಾಭಾರತದಲ್ಲಂತೂ ವ್ಯಾಸಭಗವಾನರು ಅವುಗಳನ್ನು ಕೇವಲ ಧರ್ಮದರ್ಶನಕ್ಕಾಗಿಯೇ ಉಪಯೋಗಿಸಿದ್ದಾರೆ.

ಮಹಾಭಾರತಕಾರರು ಭೌತಿಕಯುದ್ಧದ ಆವಶ್ಯಕತೆಯನ್ನು ಸಿದ್ಧಾಂತಮಾಡಿಲ್ಲ; ಅದರ ನಿರರ್ಥಕತೆಯನ್ನು ತೋರಿಸಿದ್ದಾರೆ. ಗೆದ್ದವರು ಅಳುವಂತೆಯೂ ಪಶ್ಚಾತ್ತಾಪಪಡುವಂತೆಯೂ ತೋರಿಸಿದ್ದಾರೆ. ಮತ್ತು ಯುದ್ಧದ ಕೊನೆಯಲ್ಲಿ ಅವರು ಉಳಿಸಿರುವದು ದುಃಖವೊಂದನ್ನೇ.

ಈ ಮಹಾಗ್ರಂಥದಲ್ಲಿ ಗೀತೆಯು ಶಿರೋಮಣಿಯಂತೆ ವಿರಾಜಿಸುತ್ತದೆ. ಅದರ ಎರಡನೆಯ ಅಧ್ಯಾಯವು ಭೌತಿಕಯುದ್ಧದ ವ್ಯವಹಾರವನ್ನು ಕಲಿಸುವದರ ಬದಲು ಸ್ಥಿತಪ್ರಜ್ಞನ ಲಕ್ಷಣಗಳನ್ನು ಬೋಧಿಸುತ್ತದೆ. ಸ್ಥಿತಪ್ರಜ್ಞನಿಗೆ ಐಹಿಕ ಯುದ್ಧದೊಡನೆ ಯಾವ ಸಂಬಂಧವೂ ಇಲ್ಲವೆಂದು ನನಗೆ ಪ್ರತೀತವಾಗುತ್ತದೆ. ಈ ವಿಷಯವು ಅವನ ಲಕ್ಷಣಗಳಲ್ಲಿಯೇ ಕಂಡುಬರುತ್ತದೆ. ಸಾಧಾರಣ ಪಾರಿವಾರಿಕ ಜಗಳಗಳ ಔಚಿತ್ಯ ಅನೌಚಿತ್ಯವನ್ನು ನಿರ್ಣಯಿಸುವದಕ್ಕೆ ಗೀತೆಗೆ ಸಮನಾದ ಪುಸ್ತಕವಿರುವದು ಅಸಂಭವ.

ಮೂರ್ತಿವೆತ್ತ ಶುದ್ಧ ಸಂಪೂರ್ಣಜ್ಞಾನವೇ ಗೀತೆಯ ಶ್ರೀಕೃಷ್ಣನು. ಪರಂತು ಆತನು ಕಾಲ್ಪನಿಕನು. ಹೀಗೆಂದರೆ ಕೃಷ್ಣನಾಮದಿಂದ ಅವತರಿಸಿದ ಪುರುಷನ ನಿಷೇಧವಲ್ಲ. ಕೇವಲ ಸಂಪೂರ್ಣ ಕೃಷ್ಣನು ಕಾಲ್ಪನಿಕನು; ಅವತಾರಕ್ಕೆ ತದನಂತರ ಆರೋಪಿಸಲ್ಪಟ್ಟವನು—ಎಂಬುದೇ ಇದರ ಅರ್ಥ.

ಅವತಾರದ ತಾತ್ಪರ್ಯವೇನೆಂದರೆ ಶರೀರಧಾರಿಯಾದ ಪುರುಷವಿಶೇಷ. ಎಲ್ಲಾ ಜೀವಗಳೂ ಈಶ್ವರನ ಅವತಾರಗಳು. ಆದರೆ ಲೌಕಿಕ ಭಾಷೆಯಲ್ಲಿ ನಾವು ಎಲ್ಲರನ್ನೂ ಅವತಾರಗಳೆಂದು ಕರೆಯುವದಿಲ್ಲ. ಯಾವ ಪುರುಷನು ತನ್ನ ಯುಗದಲ್ಲಿ ಎಲ್ಲರಿಗಿಂತಲೂ ಮಿಗಿಲಾಗಿ ಧರ್ಮಿಷ್ಠನಾಗಿರುತ್ತಾನೋ ಅವನನ್ನೇ ಭಾವೀ ಪ್ರಜೆಗಳು ಅವತಾರರೂಪದಿಂದ ಪೂಜಿಸುತ್ತಾರೆ. ಇದರಲ್ಲಿ ನನಗೆ ಯಾವ ದೋಷವೂ ಕಾಣುವದಿಲ್ಲ. ಇದರಿಂದ ಈಶ್ವರನ ಹಿರಿತನಕ್ಕೆ ಕುಂದಕವುಂಟಾಗುವದೂ ಇಲ್ಲ; ಸತ್ಯಕ್ಕೆ ಆಘಾತವೊದಗುವದೂ ಇಲ್ಲ

'ಆದಮ್ ಖುದಾ ನಹೀ, ಲೇಕಿನ್ ಖುದಾಕೇ ನೂರ್‌ಸೇ ಆದಮ್ ಜುದಾ ನಹೀ.' (ನರನು ಈಶ್ವರನಲ್ಲ, ಆದರೆ ಈಶ್ವರನ ಪ್ರಭೆಯಿಂದ ನರನು ಬೇರೆಯಲ್ಲ.) ಆಯಾ ಯುಗದಲ್ಲಿ ಯಾರಲ್ಲಿ ಧರ್ಮಜಾಗ್ರುತಿಯು ಎಲ್ಲರಿಗಿಂತ ಅಧಿಕವಾಗಿ ಉಂಟೋ ಆತನೇ ವಿಶೇಷಾವತಾರನು. ಈ ವಿಚಾರಶ್ರೇಣಿಯಿಂದ ಕೃಷ್ಣರೂಪೀ ಸಂಪೂರ್ಣಾವತಾರವು ಇಂದು ಹಿಂದೂ ಧರ್ಮದಲ್ಲಿ ಸಾಮ್ರಾಜ್ಯವಾಳುತ್ತಿದೆ.

ಈ ದೃಶ್ಯವು ಮನುಷ್ಯನ ಅಂತಿಮ ಪ್ರಿಯ ಅಭಿಲಾಷೆಯನ್ನು ಸೂಚಿಸುತ್ತದೆ. ಮನುಷ್ಯನಿಗೆ ಈಶ್ವರರೂಪವು ಪ್ರಾಪ್ತವಾದ ಹೊರತು ಸುಖವು ಲಭಿಸುವದಿಲ್ಲ, ಶಾಂತಿಯೊದಗುವದಿಲ್ಲ. ಈಶ್ವರರೂಪನಾಗುವ ಪ್ರಯತ್ನವೇ ನಿಜವಾದ ಏಕಮಾತ್ರವಾದ ಪುರುಷಾರ್ಥ. ಇದೇ ಆತ್ಮದರ್ಶನ. ಈ ಆತ್ಮದರ್ಶನವು ಎಲ್ಲಾ ಧರ್ಮಗ್ರಂಥಗಳ ವಿಷಯವಾಗಿರುವಂತೆಯೇ ಗೀತೆಯ ವಸ್ತುವಾಗಿಯೂ ಇದೆ. ಆದರೆ ಗೀತಾಕಾರರು ಈ ವಿಷಯವನ್ನು ಪ್ರತಿಪಾದಿಸಲೋಸುಗ ಗೀತೆಯನ್ನು ರಚಿಸಲಿಲ್ಲ. ಆತ್ಮಾರ್ಥಿಗೆ ಆತ್ಮದರ್ಶನಗೈಯಲು ಅದ್ವಿತೀಯ ಉಪಾಯವೊಂದನ್ನು ತೋರಿಸುವದು ಗೀತೆಯ ಆಶಯವು. ಯಾವ ವಸ್ತುವು ಹಿಂದೂ ಧರ್ಮಗ್ರಂಥಗಳಲ್ಲಿ ಅಲ್ಲೊಂದು ಇಲ್ಲೊಂದು ಕಡೆ ಕಾಣಿಸಿಕೊಳ್ಳುವುದೋ ಆ ವಸ್ತುವನ್ನು ಗೀತೆಯು ವಿವಿಧ ರೂಪಗಳಲ್ಲಿ, ಅನೇಕ ಶಬ್ದಗಳಿಂದ, ಪುನರುಕ್ತಿದೋಷವನ್ನು ಮೈಮೇಲೆ ಹೊತ್ತುಕೊಂಡು ಕೂಡ, ಒಳ್ಳೆಯ ರೀತಿಯಲ್ಲಿ ಸ್ಥಾಪಿಸುತ್ತದೆ.

ಕರ್ಮಫಲತ್ಯಾಗವೇ ಆ ಅದ್ವಿತೀಯ ಉಪಾಯ.

ಈ ಮಧ್ಯಬಿಂದುವಿನ ನಾಲ್ಕು ಕಡೆಗಳಲ್ಲಿ ಗೀತೆಯ ಮಾಟವೆಲ್ಲವೂ ರಚಿತವಾಗಿದೆ. ಭಕ್ತಿ, ಜ್ಞಾನ, ಇವೇ ಮುಂತಾದವು ಅದರ ಸುತ್ತಮುತ್ತಲೂ ತಾರಾಮಂಡಲದಂತೆ ಸಜ್ಜುಗೊಳಿಸಲ್ಪಟ್ಟಿವೆ. ಎಲ್ಲಿ ದೇಹವುಂಟೋ ಅಲ್ಲಿ ಕರ್ಮವಿದ್ದೇ ಇದೆ. ಅದರಿಂದ ಯಾವನೂ

ಮುಕ್ತನಲ್ಲ. ಆದರೂ ಶರೀರವನ್ನು ಪ್ರಭುಮಂದಿರವನ್ನಾಗಿ ಮಾಡಿ ಆದರ ಮೂಲಕ ಮುಕ್ತಿಯನ್ನು ಗಳಿಸಬಹುದು. ಇದನ್ನು ಎಲ್ಲಾ ಧರ್ಮಗಳೂ ಪ್ರತಿಪಾದಿಸುತ್ತವೆ. ಪರಂತು ಎಲ್ಲಾ ಕರ್ಮದಲ್ಲಿ ಸ್ವಲ್ಪ ದೋಷವು ಇದ್ದೇ ಇರುತ್ತದೆ. ಮುಕ್ತಿಯಾದರೋ ನಿರ್ದೋಷ ನಿಗೆ ಸಾಧ್ಯ. ಹಾಗಾದರೆ ಕರ್ಮಬಂಧನದಿಂದ—ಅರ್ಥಾತ್ ದೋಷಸ್ಪರ್ಶದಿಂದ—ವಿಮೋಚನೆಂಪೆಂತು? ಇದಕ್ಕೆ ಉತ್ತರವನ್ನು ಗೀತೆಯು ನಿಶ್ಚಯಾತ್ಮಕ ಶಬ್ದಗಳಲ್ಲಿ ಕೊಟ್ಟಿದೆ: 'ನಿಷ್ಕಾಮ ಕರ್ಮದಿಂದ; ಯಜ್ಞಾರ್ಥವಾಗಿ ಕರ್ಮಗೈದು ; ಕರ್ಮಫಲವನ್ನು ತ್ಯಜಿಸಿ; ಎಲ್ಲಾ ಕರ್ಮಗಳನ್ನೂ ಕೃಷ್ಣಾರ್ಪಣ ಮಾಡಿ; ಎಂದರೆ ಮನ, ವಚನ, ಶರೀರಗಳನ್ನು ಈಶ್ವರನಲ್ಲಿ ಹೋಮ ಮಾಡಿ" ಎಂದು.

ಆದರೆ ನಿಷ್ಕಾಮವು, ಕರ್ಮಫಲತ್ಯಾಗವು, ಕೇವಲ ಬಾಯಿ ಮಾತ್ರನಿಂದಲೇ ಉಂಟಾಗುವದಿಲ್ಲ. ಇದು ಕೇವಲ ಬುದ್ಧಿಯು ಪ್ರಯೋಗವಲ್ಲ ಇದು ಹೃದಯಮಂಥನದಿಂದಲೇ ಉತ್ಪನ್ನವಾಗ ವುದು. ಈ ತ್ಯಾಗಶಕ್ತಿಯನ್ನು ಹುಟ್ಟಿಸುವದಕ್ಕೆ ಜ್ಞಾನವು ಬೇಕು. ಒಂದು ರೀತಿಯ ಜ್ಞಾನವನ್ನು ಅನೇಕ ಪಂಡಿತರು ಗಳಿಸುತ್ತಾರೆ. ವೇದವೇ ಮುಂತಾದವು ಅವರಿಗೆ ಕಂಠಗತವಾಗಿರುತ್ತವೆ; ಪರಂತು ಅವರಲ್ಲಿ ಹೆಚ್ಚು ಮಂದಿ ಭೋಗಾದಿಗಳಲ್ಲಿ ಲೀನರಾಗಿರುತ್ತಾರೆ. ಜ್ಞಾನದ ಅತಿರೇಕವು ಶುಷ್ಕ ಪಾಂಡಿತ್ಯದಲ್ಲಿ ರೂಪಗೊಳ್ಳದಂತೆ ಗೀತಾಕಾರರು ಜ್ಞಾನದ ಜೊತೆಗೆ ಭಕ್ತಿಯನ್ನು ಸೇರಿಸಿ ಅದಕ್ಕೆ ಪ್ರಥ ಮಸ್ಥಾನವನ್ನು ಕೊಟ್ಟಿದ್ದಾರೆ ಭಕ್ತಿಯಿಲ್ಲದ ಜ್ಞಾನವು ಕೆಲಸಕ್ಕೆ ಬಾರದು. ಇದಕ್ಕಾಗಿ ಹೇಳಿದ್ದಾರೆ: 'ಭಕ್ತಿ ಕರ್ಯೋ, ತೋ ಜ್ಞಾನ ಮಿಲ ಹೀ ಜಾಯಗಾ' (ಭಕ್ತಿಯಿಂದಿರು, ಜ್ಞಾನವು ದೊರೆತೇ ದೊರೆ ಯುವುದು) ಎಂದು ಆದರೆ ಭಕ್ತಿಯು 'ಕತ್ತಿಯಲಗಿನ ಮೇಲೆ ಓಡುವಂತೆ'. ಆದುದರಿಂದ ಗೀತಾಕಾರರು ಭಕ್ತನ ಲಕ್ಷಣಗಳನ್ನು ಸ್ಥಿತಪ್ರಜ್ಞನ ಲಕ್ಷಣಗಳಂತೆಂದು ವರ್ಣಿಸಿದ್ದಾರೆ.

ತಾತ್ಪರ್ಯವೇನೆಂದರೆ: ಗೀತೆಯ ಭಕ್ತಿಯು ಮಂಕನ ಸರಳತೆಯಲ್ಲ, ಅಂಧಶ್ರದ್ಧೆಯಲ್ಲ. ಗೀತೆಯಲ್ಲಿ ವರ್ಣಿತವಾದ ಆಚಾರಗಳಿಗೆ ಬಾಹ್ಯಚೇಷ್ಟೆಯ ಅಥವಾ ಕ್ರಿಯೆಯ ಸಂಬಂಧವು ಅತ್ಯಲ್ಪ. ಮಾಲಾತಿಲಕಗಳನ್ನೂ ಅರ್ಘ್ಯಾದಿ ಸಾಧನಗಳನ್ನೂ ಭಕ್ತನು ಅಗತ್ಯವಾಗಿ ಉಪಯೋಗಿಸಲಿ. ಆದರೆ ಭಕ್ತಿಯ ಲಕ್ಷಣಗಳು ಅವಲ್ಲ. ಯಾವನು ಯಾರೊಬ್ಬರನ್ನೂ ದ್ವೇಷಿಸುವದಿಲ್ಲವೋ, ಯಾರು ಕರುಣೆಯ ಭಂಡಾರವಾಗಿರುವನೋ, ಮಮತಾರಹಿತನೋ, ನಿರಹಂಕಾರನೋ, ಯಾರಿಗೆ ಸುಖದುಃಖಗಳೂ ಶೀತೋಷ್ಣಗಳೂ ಸಮಾನವೋ, ಯಾರು ಕ್ಷಮಾಶೀಲನೋ, ಯಾರು ಸದಾ ಸಂತೋಷದಿಂದಿರುವನೋ, ಯಾರ ನಿಶ್ಚಯವು ಎಂದಿಗೂ ಕದಲುವದಿಲ್ಲವೋ, ಯಾರು ಮನಸ್ಸನ್ನೂ ಬುದ್ಧಿಯನ್ನೂ ಈಶ್ವರನಿಗೆ ಅರ್ಪಿಸಿಬಿಟ್ಟಿರುವನೋ, ಯಾರನ್ನು ಕಂಡರೆ ಜನರು ಹೆದರುವದಿಲ್ಲವೋ, ಯಾರು ಜನರಲ್ಲಿ ಭಯವಿಟ್ಟಿಲ್ಲವೋ, ಯಾರು ಹರ್ಷಶೋಕಭಯಾದಿಗಳಿಂದ ಮುಕ್ತನಾಗಿರುವನೋ, ಯಾರು ಪವಿತ್ರನೋ, ಯಾರು ಕಾರ್ಯದಕ್ಷನಾಗಿದ್ದರೂ ತಟಸ್ಥನಾಗಿರುವನೋ, ಯಾರು ಶುಭಾಶುಭವನ್ನು ತ್ಯಜಿಸುವನೋ, ಯಾರು ಶತ್ರುಮಿತ್ರರಲ್ಲಿ ಸಮಭಾವವಿಡುವನೋ, ಯಾರಿಗೆ ಮಾನಾಪಮಾನಗಳು ಸಮವೋ, ಯಾರಿಗೆ ಸ್ತುತಿಯಿಂದ ಆಹ್ಲಾದವೂ ನಿಂದೆಯಿಂದ ಗ್ಲಾನಿಯೂ ಉಂಟಾಗುವದಿಲ್ಲವೋ, ಯಾರು ಮೌನಧಾರಿಯೋ, ಯಾರಿಗೆ ಏಕಾಂತವು ಪ್ರಿಯವಾಗಿರುವುದೋ, ಯಾರು ಸ್ಥಿರಬುದ್ಧಿಯುಳ್ಳವನೋ, ಅವನೇ ಭಕ್ತನು. ಈ ಭಕ್ತಿಯು ಆಸಕ್ತರಾದ ಸ್ತ್ರೀಪುರಷರ ಪಾಲಿಗೆ ಸೇರಿದುದಲ್ಲ.

ಜ್ಞಾನವನ್ನು ಪಡೆಯುವದು, ಭಕ್ತನಾಗುವದು, ಇದೇ ಆತ್ಮದರ್ಶನವೆಂಬುದು ಮೇಲೆ ಹೇಳಿರುವದರಿಂದ ನಮಗೆ ಕಾಣಬರುತ್ತದೆ. ಆತ್ಮದರ್ಶನವು ಅದರಿಂದ ಭಿನ್ನವಾದ ವಸ್ತುವೇನೂ ಅಲ್ಲ. ಒಂದು ರೂಪಾಯಿಯನ್ನು ಕೊಟ್ಟು ವಿಷವನ್ನಾದರೂ ಕೊಳ್ಳಬಹುದು; ಅಮೃತವನ್ನಾದರೂ ತೆಗೆದುಕೊಂಡು ಬರಬಹುದು. ಆದರೆ ಜ್ಞಾನ ಅಥವಾ ಭಕ್ತಿಯಿಂದ ಬಂಧನವನ್ನಾದರೂ ಗಳಿಸಬಹುದು, ಮೋಕ್ಷ

ವನ್ನಾದರೂ ಪಡೆಯಬಹುದು ಎಂದು ಹೇಳಲಾಗುವದಿಲ್ಲ. ಇಲ್ಲಿಯಾದರೊ ಸಾಧನವೂ ಸಾಧ್ಯವೂ ಕೇವಲ ಒಂದೇ ಅಲ್ಲದಿದ್ದರೂ ಹೆಚ್ಚುಕಡಿಮೆ ಒಂದೇ ಸಮನಾಗಿವೆ—ಸಾಧನದ ಪರಾಕಾಷ್ಠ ದಶೆಯೇ ಮೋಕ್ಷ. ಗೀತೆಯ ಮೋಕ್ಷಕ್ಕೆ ಪರಮಶಾಂತಿಯೆಂದರ್ಥ.

ಈ ತೆರನಾದ ಜ್ಞಾನವನ್ನೂ ಭಕ್ತಿಯನ್ನೂ ಕರ್ಮಫಲತ್ಯಾಗದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಬೇಕು. ಲೌಕಿಕ ಕಲ್ಪನೆಯಲ್ಲಿ ಶುಷ್ಕ ಪಂಡಿತನೂ ಜ್ಞಾನಿಯೆಂದೇ ಎಣಿಸಲ್ಪಡುತ್ತಾನೆ. ಅವನು ಯಾವ ಕೆಲಸವನ್ನೂ ಮಾಡಬೇಕಾಗುವದಿಲ್ಲ. ಕೈಯಿಂದ ಲೋಟವನ್ನೆತ್ತುವದು ಕೂಡ ಅವನಿಗೆ ಕರ್ಮಬಂಧನವಾಗುತ್ತದೆ. ಯಜ್ಞಶೂನ್ಯನನ್ನು ಜ್ಞಾನಿಯೆಂದೆಣಿಸುವ ಕಡೆ ಲೋಟವನ್ನು ಎತ್ತುವಂತಹ ತುಚ್ಛ ಲೌಕಿಕ ಕ್ರಿಯೆಗೆ ಸ್ಥಾನವು ತಾನೆ ಹೇಗೆ ಸಿಕ್ಕೀತು ?

ಲೌಕಿಕ ಕಲ್ಪನೆಯಲ್ಲಿ ಭಕ್ತನೆಂದರೆ ಪ್ರಪಂಚಜ್ಞಾನವಿಲ್ಲದ ಮಂಕ. ಮಾಲೆಯನ್ನು ಹಿಡಿದು ಜಪಮಾಡುವವನು. ಸೇವಾ ಕರ್ಮಮಾಡಿದರೂ ಅವನ ಜಪಸರವು ತೊಡಕಾಗಿ ಹೋಗುತ್ತದೆ. ಆದುದರಿಂದ ಅವನು ಖಾನಪಾನ ಮುಂತಾದ ಭೋಗಗಳನ್ನು ಭೋಗಿಸುವಾಗ ಮಾತ್ರ ಮಾಲೆಯನ್ನು ತೆಗೆದಿಡುತ್ತಾನೆ; ಹಿಟ್ಟು ಬೀಸುವದಕ್ಕಾಗಲಿ ರೋಗಿಗೆ ಸೇವಾಶುಶ್ರೂಷೆಮಾಡುವದಕ್ಕಾಗಲಿ ಎಂದಿಗೂ ಇಲ್ಲ.

ಇವೆರಡು ವರ್ಗದ ಜನರಿಗೂ ಗೀತೆಯು ಸ್ಪಷ್ಟವಾಗಿ ಹೇಳಿದೆ : '' ಕರ್ಮವಿಲ್ಲದೆ ಯಾರೂ ಸಿದ್ಧಿ ಹೊಂದಲಿಲ್ಲ. ಜನಕಾದಿಗಳು ಕೂಡ ಕರ್ಮದ ಮೂಲಕವೇ ಜ್ಞಾನಿಗಳಾದರು. ನಾನು ಕೂಡ ಆಲಸ್ಯರಹಿತನಾಗಿ ಕರ್ಮ ಮಾಡುತ್ತಾ ಇರದಿದ್ದರೆ ಈ ಲೋಕಗಳೆಲ್ಲಾ ನಾಶವಾಗುವುವು'' ಎಂದು. ಹೀಗಿದ್ದಮೇಲೆ ಇನ್ನು ಜನರ ವಿಷಯದಲ್ಲಿ ಹೇಳಬೇಕಾದುದೇನು ?

ಪರಂತು ಒಂದು ಕಡೆ ಎಲ್ಲಾ ಕರ್ಮಗಳು ಬಂಧನರೂಪವುಳ್ಳವು. ಇದು ನಿರ್ವಿವಾದವಾಗಿದೆ. ಇನ್ನೊಂದು ಕಡೆ ದೇಹಿಯು

ಇಚ್ಛೆ-ಅನಿಚ್ಛೆಗಳಿಂದಲೂ ಕರ್ಮ ಮಾಡುತ್ತಿರುತ್ತಾನೆ. ಶಾರೀರಿಕ ಅಥವಾ ಮಾನಸಿಕ ಚೇಷ್ಟೆಗಳೆಲ್ಲವೂ ಕರ್ಮಗಳೇ. ಹಾಗಾದರೆ ಕರ್ಮ ಮಾಡುತ್ತಿದ್ದರೂ ಮನುಷ್ಯನು ಬಂಧನಮುಕ್ತನಾಗಿರುವದು ಹೇಗೆ ಸಾಧ್ಯ? ನನಗೆ ತಿಳಿದಮಟ್ಟಿಗೆ ಈ ತೊಡಕನ್ನು ಗೀತೆಯು ಬಿಡಿಸಿರುವ ರೀತಿಯಲ್ಲಿ ಇನ್ನಾವ ಧರ್ಮಗ್ರಂಥವೂ ಬಿಡಿಸಿಲ್ಲ. ''ಫಲಾಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡು'', ''ಆಶಾರಹಿತನಾಗಿ ಕರ್ಮವನ್ನು ಮಾಡು'', ''ನಿಷ್ಕಾಮಿಯಾಗಿ ಕರ್ಮವನ್ನು ಮಾಡು'' ಎಂದು ಗೀತೆಯು ಹೇಳುತ್ತದೆ. ಗೀತೆಯ ಈ ಧ್ವನಿಯನ್ನು ಮರೆಯಲಾಗುವದೇ ಇಲ್ಲ. ಯಾವನು ಕರ್ಮವನ್ನು ಬಿಡುತ್ತಾನೋ ಅವನು ಬೀಳುತ್ತಾನೆ. ಯಾವನು ಕರ್ಮವನ್ನು ಮಾಡುತ್ತಿದ್ದರೂ ಅದರ ಫಲವನ್ನು ಬಿಡುತ್ತಾನೋ ಅವನು ಏರುತ್ತಾನೆ.

ಇಲ್ಲಿ ಫಲತ್ಯಾಗವೆಂದರೆ ತ್ಯಾಗಿಗೆ ಫಲವು ಲಭಿಸುವದಿಲ್ಲವೆಂದು ಯಾರೂ ತಿಳಿದುಕೊಳ್ಳದಿರಲಿ. ಈ ಅರ್ಥಕ್ಕೆ ಗೀತೆಯಲ್ಲಿ ಎಲ್ಲಿಯೂ ಸ್ಥಾನವಿಲ್ಲ. ಫಲತ್ಯಾಗವೆಂದರೆ ಫಲಗ ಸಂಬಂಧವಾಗಿ ಆಸಕ್ತಿಯ ಅಭಾವವೆಂದರ್ಥ. ವಾಸ್ತವವಾಗಿಯಾದರೊ ಫಲತ್ಯಾಗಿಗೆ ಸಾಸಿರ ಮಡಿ ಹೆಚ್ಚು ಫಲವು ದೊರಕುತ್ತದೆ. ಗೀತೆಯ ಫಲತ್ಯಾಗದಲ್ಲಿ ಅಸೀಮ ಶ್ರದ್ಧೆಯ ಪರೀಕ್ಷೆಯು ಅಡಗಿರುತ್ತದೆ. ಯಾವ ಮನುಷ್ಯನು ಪರಿಣಾಮವನ್ನು ಕುರಿತು ಯೋಚಿಸುತ್ತಿರುತ್ತಾನೊ ಅವನು ಅನೇಕ ಬಾರಿ ಕರ್ಮ ಕರ್ತವ್ಯ ಭ್ರಷ್ಟನಾಗುತ್ತಾನೆ. ಅವನು ಅಧೀರನಾಗುತ್ತಾನೆ. ಇದರಿಂದ ಅವನು ಕ್ರೋಧವಶನಾಗುತ್ತಾನೆ. ಮತ್ತು ಅವನು ಮಾಡಲು ಯೋಗ್ಯವಲ್ಲದುದನ್ನು ಮಾಡತೊಡಗುತ್ತಾನೆ. ಒಂದು ಕರ್ಮದಿಂದ ಮತ್ತೊಂದರಲ್ಲಿಯೂ ಮತ್ತೊಂದರಿಂದ ಮಗದೊಂದರಲ್ಲಿಯೂ ಪ್ರವರ್ತನಾಗುತ್ತಾ ಹೋಗುತ್ತಾನೆ. ಪರಿಣಾಮದ ಚಿಂತೆಯನ್ನು ಮಾಡುವವನ ಸ್ಥಿತಿಯು ವಿಷಯಾಂಧನ ಸ್ಥಿತಿಯಂತೆ ಆಗಿ ಕಡೆಯಲ್ಲಿ ಅವನು ವಿಷಯಿಯಂತೆ ಸಾರಾಸಾರದ, ನೀತಿ-ಅನೀತಿಯ ವಿವೇಕವನ್ನು ಬಿಟ್ಟು ಫಲಪ್ರಾಪ್ತಿ

ಗಾಗಿ ಎಂತಹ ಸಾಧನಗಳನ್ನಾದರೂ ಉಪಯೋಗಿಸಿ ಅದನ್ನೇ ಧರ್ಮವೆಂದೆಣಿಸುತ್ತಾನೆ.

ಫಲಾಸಕ್ತಿಯ ಇಂತಹ ಕಟು ಪರಿಣಾಮಗಳ ಮಧ್ಯದಿಂದ ಗೀತಾಕಾರರು ಅನಾಸಕ್ತಿ ಅಥವಾ ಕರ್ಮಫಲತ್ಯಾಗದ ಸಿದ್ಧಾಂತ ವನ್ನು ರೂಪುಗೊಳಿಸಿ ಅದನ್ನು ಅತ್ಯಂತ ಆಕರ್ಷಕ ಭಾಷೆಯಲ್ಲಿ ಪ್ರಪಂಚದ ಮುಂದಿಟ್ಟಿದ್ದಾರೆ. ಸಾಮಾನ್ಯ ಭಾವನೆಯೇನೆಂದರೆ: ಧರ್ಮವೂ ಅರ್ಥವೂ ಒಂದಕ್ಕೊಂದು ವಿರೋಧಿಗಳಾಗಿವೆ. "ವ್ಯಾಪಾರ ಇತ್ಯಾದಿ ಲೌಕಿಕ ವ್ಯವಹಾರಗಳಲ್ಲಿ ಧರ್ಮವನ್ನು ಪಾಲಿಸಲಾಗುವ ದಿಲ್ಲ; ಅಲ್ಲಿ ಧರ್ಮದ ಉಪಯೋಗವು ಕೇವಲ ಮೋಕ್ಷದ ಸಲು ವಾಗಿಯೇ; ಧರ್ಮದ ಜಾಗದಲ್ಲಿ ಧರ್ಮವೂ ಅರ್ಥದ ಸ್ಥಳದಲ್ಲಿ ಅರ್ಥವೂ ಶೋಭಿಸುತ್ತವೆ." ನನ್ನ ಅಭಿಪ್ರಾಯದಲ್ಲಿ ಗೀತಾಕಾ ರರು ಈ ಮೂಢ ನಂಬಿಕೆಯನ್ನು ಹೋಗಲಾಡಿಸಿದ್ದಾರೆ. ಅವರು ಮೋಕ್ಷಕ್ಕೂ ವ್ಯವಹಾರಕ್ಕೂ ಮಧ್ಯೆ ಇಂತಹ ಭೇದವನ್ನೇನೂ ಇಡ ಲಿಲ್ಲ. ಮತ್ತೆ ನೋಡಿದರೆ ಅವರು ವ್ಯವಹಾರದಲ್ಲಿ ಧರ್ಮವನ್ನು ಚರಿತಾರ್ಥಗೈದಿದ್ದಾರೆ. ಯಾವ ಧರ್ಮವನ್ನು ವ್ಯವಹಾರದಲ್ಲಿ ತರಲಾಗುವದಿಲ್ಲವೊ ಅದು ಧರ್ಮವೇ ಅಲ್ಲ—ನನ್ನ ಅಭಿಪ್ರಾಯ ದಲ್ಲಿ ಈ ಸೂಚನೆಯು ಗೀತೆಯಲ್ಲಿ ಅಡಕವಾಗಿದೆ. ಅರ್ಥಾತ್ ಗೀತೆಯ ಮತಾನುಸಾರ ಯಾವ ಕರ್ಮಗಳನ್ನು ಆಸಕ್ತಿಯಿಲ್ಲದೆ ಮಾಡಲಾಗುವದೇ ಇಲ್ಲವೊ ಅವೆಲ್ಲವೂ ತ್ಯಾಜ್ಯವಾದವು. ಇಂತಹ ಸುವರ್ಣನಿಯಮವು ಮನುಷ್ಯನನ್ನು ಅನೇಕ ಧರ್ಮಸಂಕಟಗಳಿಂದ ಪಾರುಮಾಡುತ್ತದೆ. ಈ ಮತಕ್ಕೆ ಅನುಸಾರವಾಗಿ ಖೂನಿ, ಸುಳ್ಳು, ವ್ಯಭಿಚಾರ, ಇವೇ ಮುಂತಾದ ಕರ್ಮಗಳು ಸಹಜವಾಗಿಯೇ ತ್ಯಾಜ್ಯ ವಾಗುತ್ತವೆ. ಮಾನವಜೀವನವು ಸರಳವಾಗಿ ಪರಿಣಮಿಸುತ್ತದೆ. ಸರಳತೆಯಿಂದ ಶಾಂತಿಯುತ್ಪನ್ನವಾಗುತ್ತದೆ. ಫಲತ್ಯಾಗವೆಂದರೆ ಪರಿಣಾಮ ಸಂಬಂಧವಾಗಿ ಲಕ್ಷ್ಯವಿಲ್ಲದಿರುವದೆಂದು ಅರ್ಥವೇ ಅಲ್ಲ. ಪರಿಣಾಮಸಾಧನೆಯ ವಿಚಾರ ಮತ್ತು ಅದರ ಜ್ಞಾನ, ಇವು ಅತ್ಯಾ

ಪತ್ಯಕವಾಗಿರುತ್ತದೆ. ಇದಾವಮೇಲೆ ಯಾವ ಮನುಷ್ಯನು ಪರಿಣಾಮವನ್ನು ಇಚ್ಛಿಸದೆಯೇ ಸಾಧನದಲ್ಲಿ ತನ್ಮಯನಾಗಿರುತ್ತಾನೋ ಅವನೇ ಫಲತ್ಯಾಗಿಯು.

ಈ ದೃಷ್ಟಿಯಿಂದ ವಿಚಾರ ಮಾಡುತ್ತಾ ನನಗೆ ಪ್ರತೀತವಾಗಿರುವದೇನೆಂದರೆ: ಗೀತೆಯ ಬೋಧೆಯನ್ನು ಕಾರ್ಯರೂಪಕ್ಕೆ ತರಲೆಳಸುವವರು ಸಹಜವಾಗಿಯೇ ಸತ್ಯವನ್ನೂ ಅಹಿಂಸೆಯನ್ನೂ ಪಾಲಿಸಬೇಕಾಗುತ್ತದೆ. ಫಲಾಸಕ್ತಿಯಿಲ್ಲದೆ ಮನುಷ್ಯನಿಗೆ ಅಸತ್ಯವನ್ನು ನುಡಿಯಲಾಗಲಿ ಹಿಂಸಾಕಾರ್ಯ ಮಾಡಲಾಗಲಿ ಆಸೆಯುಂಟಾಗುವದಿಲ್ಲ. ಯಾವ ಹಿಂಸಾಕಾರ್ಯವನ್ನಾಗಲಿ ಅಸತ್ಯದ ಕೆಲಸವನ್ನಾಗಲಿ ತೆಗೆದುಕೊಂಡರೂ ಅದರ ಹಿಂದೆ ಪರಿಣಾಮದ ಇಚ್ಛೆಯಿರುವದು ಆವಶ್ಯಕವೆಂದು ಕಂಡುಬರುತ್ತದೆ. ಆದರೆ ಗೀತೆಯ ವಿಷಯವು ಅಹಿಂಸೆಯ ಪ್ರತಿಪಾದನೆಯಲ್ಲ. ಗೀತಾಕಾಲಕ್ಕೆ ಮುಂಚೆಯೂ ಅಹಿಂಸೆಯು ಪರಮ ಧರ್ಮವೆಂದೆಣಿಸಲ್ಪಡುತ್ತಿದ್ದಿತು. ಗೀತೆಯು ಪ್ರತಿಪಾದಿಸಬೇಕಾದುದು ಅನಾಸಕ್ತಿಯ ಸಿದ್ಧಾಂತ. ಎರಡನೆಯ ಅಧ್ಯಾಯದಲ್ಲಿಯೇ ಈ ಮಾತು ಸ್ಪಷ್ಟವಾಗುತ್ತದೆ.

ಪರಂತು ಗೀತೆಗೆ ಅಹಿಂಸೆಯಲ್ಲಿ ಮನ್ನಣೆಯಿದ್ದರೆ, ಅಥವಾ ಅನಾಸಕ್ತಿಯಲ್ಲಿಯೇ ಅಹಿಂಸೆಯು ಅಡಕವಾಗಿದ್ದರೆ, ಗೀತಾಕಾರರು ಭೌತಿಕ ಯುದ್ಧವನ್ನು ದೃಷ್ಟಾಂತರೂಪದಲ್ಲಿ ತಾನೆ ಏಕೆ ಉಪಯೋಗಿಸಿದರು? ಗೀತಾಯುಗದಲ್ಲಿ ಅಹಿಂಸೆಯು ಧರ್ಮವೆಂದೆಣಿಸಲ್ಪಡುತ್ತಿದ್ದರೂ ಭೌತಿಕ ಯುದ್ಧವು ಆಗ ಸಾಧಾರಣವಾಗಿದ್ದುದರಿಂದ ಗೀತಾಕಾರರು ಇಂತಹ ಯುದ್ಧವನ್ನು ಉದಾಹರಣೆಯಾಗಿ ಉಪಯೋಗಿಸಲು ಸಂಕೋಚಪಡಲಿಲ್ಲ, ಹಾಗೆ ಸಂಕೋಚವಾಗುವದು ಸಾಧ್ಯವೂ ಅಲ್ಲ.

ಪರಂತು ಫಲತ್ಯಾಗದ ಮಹತ್ವವನ್ನು ಕುರಿತು ವಿಚಾರ ಮಾಡುತ್ತಾ ಗೀತಾಕಾರರ ಮನದಲ್ಲಿದ್ದ ಭಾವಗಳೇನು, ಅವರು ಅಹಿಂಸೆಯ ಸ್ಥಾನವನ್ನು ಎಲ್ಲಿ ನಿರ್ಧರಿಸಿದ್ದಾರೆ, ಈ ವಿಷಯವಾಗಿ

ನಾವೇನೂ ಆಲೋಚಿಸುವ ಅಗತ್ಯವಿಲ್ಲ. ಕವಿಯು ಮಹತ್ವದ ಸಿದ್ಧಾಂತಗಳನ್ನು ಪ್ರಪಂಚದ ಮುಂದೆ ಇಡುತ್ತಾನೆ. ಆದರೆ ಇದ ರಿಂದ ಅವನು ಸದಾ ತನ್ನ ಸಿದ್ಧಾಂತಗಳ ಮಹತ್ವವನ್ನು ಪೂರ್ಣ ರೂಪದಿಂದ ಅರಿತಿರುವನೆಂದಾಗಲಿ ಅಥವಾ ಹಾಗ ಅರಿತ ಮೇಲೆ ಅವುಗಳನ್ನು ಪೂರ್ಣರೂಪದಿಂದ ಭಾಷೆಯಲ್ಲಿ ವ್ಯಕ್ತಗೊಳಿಸಬಲ್ಲನೆಂ ದಾಗಲಿ ಹೇಳಲಾಗುವದಿಲ್ಲ. ಕಾವ್ಯದ ಮತ್ತು ಕವಿಯ ಮಹಿಮೆಯು ಇರುವದು ಇದರಲ್ಲಿ. ಕವಿಯ ಅರ್ಥಕ್ಕೆ ಅಂತವೇ ಇಲ್ಲ. ಮನು ಷ್ಯರು ಬೆಳೆಯುವಂತೆಯೇ ಮಹಾವಾಕ್ಯಗಳ ಅರ್ಥವು ಕೂಡ ವಿಕಾಸಗೊಳ್ಳುತ್ತಾ ಹೋಗುತ್ತದೆ. ಅನೇಕ ಮಹಾಶಬ್ದಗಳ ಅರ್ಥವು ನಿತ್ಯವೂ ಹೊಸಹೊಸದಾಗಿ ಆಗುತ್ತಿರುವದೆಂಬುದು ಭಾಷೆಗಳ ಇತಿಹಾಸವನ್ನು ಪರಿಶೀಲಿಸಿದರೆ ಗೊತ್ತಾಗುತ್ತದೆ. ಇದೇ ಮಾತು ಗೀತೆಯ ಅರ್ಥದ ವಿಷಯದಲ್ಲಿಯೂ ನಿಜವಾಗಿದೆ. ಗೀತಾಕಾ ರರು ಸ್ವಯಂ ಅನೇಕ ಮಹಾ ರೂಢಶಬ್ದಗಳ ಅರ್ಥವನ್ನು ವಿಸ್ತರಿಸಿ ರುತ್ತಾರೆ. ಗೀತೆಯ ಹಾಳೆಗಳನ್ನು ಅಲ್ಲಲ್ಲಿ ತಿರುವಿಹಾಕಿದರೆ ಕೂಡ ಈ ಮಾತು ಸ್ಪಷ್ಟವಾಗುತ್ತದೆ. ಗೀತಾಯುಗಕ್ಕೆ ಮುಂಚೆ ಯಜ್ಞ ದಲ್ಲಿ ಪಶುಹಿಂಸೆಯು ಮಾನ್ಯವಾಗಿದ್ದಿತೆಂಬ ಸಂಭವವುಂಟು; ಆದರೆ ಗೀತೆಯ ಯಜ್ಞದಲ್ಲಿ ಅದರ ಗಂಧವೇ ಇಲ್ಲ. ಅದರಲ್ಲಿ ಜಪಯಜ್ಞವು ಯಜ್ಞರಾಜನಾಗಿ ಎಣಿಸಲ್ಪಟ್ಟಿದೆ. ಯಜ್ಞವೆಂದರೆ ಪ್ರಥಮತಃ ಪರೋಪಕಾರಾರ್ಥವಾಗಿ ಶರೀರದ ಉಪಯೋಗವೆಂಬುದನ್ನು ಮೂರ ನೆಯ ಅಧ್ಯಾಯವು ತೋರಿಸುತ್ತದೆ. ಮೂರನೆಯ ಮತ್ತು ನಾಲ್ಕ ನೆಯ ಅಧ್ಯಾಯಗಳನ್ನು ಒಟ್ಟುಗೂಡಿಸಿ ಇನ್ನೂ ಕೆಲವು ವ್ಯಾಖ್ಯಾನ ಗಳನ್ನು ಊಹಿಸಬಹುದಾದರೂ ಪಶುಹಿಂಸೆಯನ್ನು ತರ್ಕಿಸಲಾ ಗುವದೇ ಇಲ್ಲ.

ಗೀತೆಯ ಸಂನ್ಯಾಸದ ಸಂಬಂಧವಾಗಿಯೂ ಹೀಗೆಯೇ. ಸರ್ವ ಕರ್ಮಗಳ ತ್ಯಾಗವು ಗೀತೆಯ ಸಂನ್ಯಾಸಕ್ಕೆ ಹೊಂದುವದೇ ಇಲ್ಲ. ಗೀತೆಯ ಸಂನ್ಯಾಸಿಯು ಅತಿಕರ್ಮಿಯಾದರೂ ಅತಿ ಅಕರ್ಮಿ ಯಾಗಿರುತ್ತಾನೆ. ಈ ರೀತಿಯಲ್ಲಿ ಗೀತಾಕಾರರು ಮಹಾಶಬ್ದಗಳಿಗೆ

ವ್ಯಾಪಕ ಅರ್ಥವನ್ನು ಮಾಡಲು ನಮಗೆ ಕಲಿಸಿಕೊಟ್ಟಿದ್ದಾರೆ. ಗೀತಾಕಾರರ ಭಾಷೆಯ ಅಕ್ಷರಗಳಿಂದ ಸಂಪೂರ್ಣಫಲತ್ಯಾಗಿಯ ಮುಖಾಂತರ ಭೌತಿಕ ಯುದ್ಧವು ನಡೆಯಬಹುದೆಂಬ ಅರ್ಥವು ಹೊರಬೀಳಬಹುದಾದರೂ ಗೀತೆಯ ಶಿಕ್ಷಣವನ್ನು ಪೂರ್ಣರೂಪದಿಂದ ಕಾರ್ಯರೂಪದಲ್ಲಿ ಪರಿಣತಿಗೊಳಿಸಲು ನಾಲ್ವತ್ತುವರ್ಷ ಸಂತತ ಪ್ರಯತ್ನಪಟ್ಟಮೇಲೆ ನನಗೆ ನಮ್ರತಾಪೂರ್ವಕ ಪ್ರತೀತವಾಗಿರುವದು ಇದೇ: **ಸತ್ಯವನ್ನೂ ಅಹಿಂಸೆಯನ್ನೂ ಸಂಪೂರ್ಣವಾಗಿ ಪಾಲಿಸಿದ ಹೊರತು ಪೂರ್ಣ ಕರ್ಮಫಲತ್ಯಾಗವು ಮನುಷ್ಯನ ಹಿಡಿಗೆ ಸಿಕ್ಕುವದಿಲ್ಲ.**

ಗೀತೆಯು ಸೂತ್ರಗ್ರಂಥವಲ್ಲ. ಅದೊಂದು ಮಹಾ ಧರ್ಮಕಾವ್ಯ. ಅದರಲ್ಲಿ ಆಳವಾಗಿ ಇಳಿದಷ್ಟು ಹೊಸತಾದ ಸುಂದರವಾದ ಅರ್ಥವು ದೊರಕುತ್ತದೆ. ಗೀತೆಯು ಜನಸಮಾಜಕ್ಕಾಗಿ ರಚಿಸಿದುದು. ಅದರಲ್ಲಿ ಒಂದೇ ವಿಷಯವನ್ನು ಅನೇಕ ಪ್ರಕಾರವಾಗಿ ಹೇಳಿದ್ದಾರೆ ಆದುದರಿಂದ ಗೀತೆಯ ಮಹಾಶಬ್ದಗಳ ಅರ್ಥವು ಯುಗಯುಗದಲ್ಲಿಯೂ ಮಾರ್ಪಟ್ಟು ವಿಸ್ತೃತವಾಗುತ್ತಾ ಹೋಗುವುದು. ಗೀತೆಯ ಮೂಲಮಂತ್ರವು ಎಂದಿಗೂ ಬದಲಾಯಿಸಲಾರದು ಆ ಮಂತ್ರವನ್ನು ಯಾವ ರೀತಿಯಲ್ಲಿ ಸ್ಥಾಪಿಸಲಾಗುವದೊ ಆ ರೀತಿಯಲ್ಲಿ ಜಿಜ್ಞಾಸುವು ತನಗಿಷ್ಟಬಂದರ್ಥವನ್ನು ಮಾಡಬಹುದು.

ಗೀತೆಯು ವಿಧಿನಿಷೇಧಗಳನ್ನು ತೋರಿಸಿಕೊಡುವದಾಗಿಯೂ ಇಲ್ಲ. ಒಬ್ಬನಿಗೆ ವಿಹಿತವಾಗಿರುವದೇ ಇನ್ನೊಬ್ಬನಿಗೆ ನಿಷಿದ್ಧವಾಗಬಲ್ಲದು. ಒಂದು ಕಾಲದಲ್ಲಿ ಅಥವಾ ಒಂದು ದೇಶದಲ್ಲಿ ವಿಹಿತವಾಗಿರುವದು ಬೇರೆ ಕಾಲದಲ್ಲಿ ಅನ್ಯದೇಶದಲ್ಲಿ ನಿಷಿದ್ಧವಾಗಬಲ್ಲದು. ಫಲಾಸಕ್ತಿಯು ನಿಷಿದ್ಧವು. ಅನಾಸಕ್ತಿಯು ವಿಹಿತವು.

ಗೀತೆಯಲ್ಲಿ ಜ್ಞಾನದ ಮಹಿಮೆಯು ಸ್ವೀಕೃತವಾಗಿದೆ. ಆದರೂ ಗೀತೆಯು ಬುದ್ಧಿಗಮ್ಯವಲ್ಲ. ಅದು ಹೃದಯಗಮ್ಯವಾದುದು. ಆದುದರಿಂದಲೇ ಅದು ಅಶ್ರದ್ಧಾಳುಗಳಿಗೆ ರಚಿತವಾದುದಲ್ಲ. ಗೀತಾಕಾರರೇ ಹೀಗೆ ಹೇಳಿದ್ದಾರೆ:

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ॥

"ಯಾರು ತಪಸ್ವಿಯಲ್ಲವೊ ಯಾರು ಭಕ್ತನಲ್ಲವೊ ಯಾರು ಕೇಳಲಿಷ್ಟಪಡುವದಿಲ್ಲವೊ ಮತ್ತು ಯಾರು ನನ್ನನ್ನು ದ್ವೇಷಿಸುತ್ತಾನೊ ಅವನಿಗೆ ನೀನು ಇದನ್ನು (ಜ್ಞಾನವನ್ನು) ಎಂದಿಗೂ ಹೇಳಕೂಡದು."

(ಅ. ೧೮, ಶ್ಲೋ. ೬೭)

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।

"ಪರಂತು ಈ ಪರಮ ಗುಹ್ಯಜ್ಞಾನವನ್ನು ಯಾರು ನನ್ನ ಭಕ್ತರಿಗೆ ಕೊಡುವನೊ ಅವನು ಪರಮಭಕ್ತಿಗೈವುದರಿಂದ ನಿಸ್ಸಂದೇಹವಾಗಿ ನನ್ನನ್ನು ಪಡೆಯುತ್ತಾನೆ."

(ಅ. ೧೮, ಶ್ಲೋ. ೬೮)

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ।
ಸೋಽಪಿಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಮ್।

"ಮತ್ತು ಯಾವ ಮನುಷ್ಯನು ದ್ವೇಷರಹಿತನಾಗಿ ಶ್ರದ್ಧಾಪೂರ್ವಕವಾಗಿ ಆಲಿಸುವನೋ ಅವನು ಕೂಡ ಮುಕ್ತನಾಗಿ ಪುಣ್ಯವಂತರು ವಾಸಿಸುವ ಶುಭಲೋಕವನ್ನು ಪಡೆಯುತ್ತಾನೆ."

(ಅ. ೧೮, ಶ್ಲೋ. ೭೧)

ಕೌಸಾನೀ (ಹಿಮಾಲಯ)
ಸೋಮವಾರ
ಆಷಾಢ ಕೃಷ್ಣ ೨, ೧೯೮೬ (ಸಂವತ್)
ತಾ. ೨೪-೬-೧೯೨೯

ಮೋಹನದಾಸ
ಕರಮಚಂದ
ಗಾಂಧೀ

೧

# ಅರ್ಜುನವಿಷಾದಯೋಗ



ಜಿಜ್ಞಾಸವಿಲ್ಲದೆ ಜ್ಞಾನವುಂಟಾಗುವದಿಲ್ಲ. ದುಃಖವಿಲ್ಲದೆ ಸುಖವು ದೊರಕುವದಿಲ್ಲ. ಧರ್ಮಸಂಕಟವೂ ಹೃದಯಮಂಥನವೂ ಎಲ್ಲಾ ಜಿಜ್ಞಾಸುಗಳಿಗೆ ಒಂದು ಬಾರಿ ಒದಗೇ ಒದಗುತ್ತದೆ.

ಧೃತರಾಷ್ಟ್ರ ಉವಾಚ :—

ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ

ಧೃತರಾಷ್ಟ್ರನು ಹೇಳಿದನು —

ಸಂಜಯನೆ, ಧರ್ಮಕ್ಷೇತ್ರರೂಪವಾದ ಕುರುಕ್ಷೇತ್ರದಲ್ಲಿ ಯುದ್ಧಮಾಡುವ ಇಚ್ಛೆಯಿಂದ ನೆರೆದ ನನ್ನ ಮಕ್ಕಳೂ ಪಾಂಡುವಿನ ಮಕ್ಕಳೂ ಏನು ಮಾಡಿದರು? ೧

**ಟಿಪ್ಪಣಿ**—ಈ ಶರೀರರೂಪಿಯಾದ ಕ್ಷೇತ್ರವು ಧರ್ಮಕ್ಷೇತ್ರ; ಏಕೆಂದರೆ ಇದು ಮೋಕ್ಷದ ದ್ವಾರವಾಗಬಲ್ಲದು. ಇದರ ಉತ್ಪತ್ತಿಯು ಪಾಪದಿಂದ; ಇದು ಪಾಪಕ್ಕೇ ಭಾಜನವಾಗಿರುತ್ತದೆ; ಆದುದರಿಂದ ಇದು ಕುರುಕ್ಷೇತ್ರ.

ಕೌರವರೆಂದರೆ ಆಸುರೀವೃತ್ತಿಗಳು, ಪಾಂಡವರೆಂದರೆ ದೈವೀವೃತ್ತಿಗಳು. ಪ್ರತಿಯೊಂದು ಶರೀರದಲ್ಲಿಯೂ ಒಳ್ಳೆಯ ಮತ್ತು ಕೆಟ್ಟ ವೃತ್ತಿಗಳ ಮಧ್ಯೆ ಯುದ್ಧವು ನಡೆಯುತ್ತಲೇ ಇರುತ್ತದೆ. ಇದರ ಅನುಭವವಿಲ್ಲದವರಾರು?

ಸಂಜಯ ಉವಾಚ—

ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್

ಆ ಸಮಯದಲ್ಲಿ ಪಾಂಡವರ ಸೇನೆಯು ಸಿದ್ಧವಾಗಿದ್ದುದನ್ನು ನೋಡಿ ರಾಜಾ ದುರ್ಯೋಧನನು ಆಚಾರ್ಯರ ಬಳಿಗೆ ಹೋಗಿ ಇಂತೆಂದನು— ೨

ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ

ಆಚಾರ್ಯರೆ, ತಮ್ಮ ಧೀಮಂತ ಶಿಷ್ಯನಾದ ದ್ರುಪದಪುತ್ರ ಧೃಷ್ಟದ್ಯುಮ್ನನು ಸಜ್ಜುಗೊಳಿಸಿರುವ ಈ ಪಾಂಡವ ಮಹಾಸೇನೆಯನ್ನು ನೋಡಿರಿ. ೩

ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ

ಇಲ್ಲಿ ಭೀಮಾರ್ಜುನರಂತಹ ಯುದ್ಧವೀರರೂ ಧನುರ್ಧರರೂ ಆದ ಯುಯುಧಾನ (ಸಾತ್ಯಕಿ)ನೂ, ವಿರಾಟನೂ, ಮಹಾರಥಿಯಾದ ದ್ರುಪದ ರಾಜನೂ ೪

ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ

ಧೃಷ್ಟಕೇತುವೂ ಚೇಕಿತಾನನೂ ಮಹಾಶೂರನಾದ ಕಾಶಿರಾಜನೂ ಪುರುಜಿತುವೂ ಕುಂತಿಭೋಜನೂ ಮನುಷ್ಯರಲ್ಲಿ ಶ್ರೇಷ್ಠನಾದ ಶೈಬ್ಯನೂ ೫

ಯುಧಾಮನ್ಯುಶ್ಚ ವಿಕ್ರಾಂತ ಉತ್ತಮಾಜಾಶ್ಚ ವೀರ್ಯವಾನ್
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ

ಇದೇ ರೀತಿಯಲ್ಲಿ ಪರಾಕ್ರಮಿಯಾದ ಯುಧಾಮನ್ಯುವೂ ಬಲಿಷ್ಠನಾದ ಉತ್ತಮೌಜನೂ ಸುಭದ್ರಾಪುತ್ರ (ಅಭಿಮನ್ಯು) ನೂ ಮತ್ತು ದ್ರೌಪದೀಪುತ್ರರೂ, ಇವರೆಲ್ಲಾ ಮಹಾರಥಿಗಳಾಗಿದ್ದಾರೆ. ೬

ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ

ಹೇ ದ್ವಿಜಶ್ರೇಷ್ಠರೆ, ಈಗ ನಮ್ಮ ಕಡೆ ಇರುವ ಪ್ರಧಾನ ನಾಯಕರನ್ನು ಗಮನಿಸಿರಿ. ನಮ್ಮ ಸೇನೆಯ ನಾಯಕರ ಹೆಸರುಗಳನ್ನು ನಾನು ತಮ್ಮ ತಿಳಿವಳಿಕೆಗಾಗಿ ಹೇಳುತ್ತೇನೆ. ೭

ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ

ಮೊದಲು ತಾವು, ಭೀಷ್ಮ, ಕರ್ಣ, ಯುದ್ಧದಲ್ಲಿ ಜಯಿಸುವ ಕೃಪಾಚಾರ್ಯರು, ಅಶ್ವತ್ಥಾಮ, ವಿಕರ್ಣ ಮತ್ತು ಸೋಮದತ್ತನ ಮಗನಾದ ಭೂರಿಶ್ರವ, ೮

ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ

ಮತ್ತು ಇವರಲ್ಲದೆ ನಾನಾಪ್ರಕಾರದ ಶಸ್ತ್ರಗಳೊಡನೆ ಯುದ್ಧ ಮಾಡುವ ಇನ್ನೂ ಅನೇಕ ಯೋಧರಿದ್ದಾರೆ. ಇವರು ನನಗಾಗಿ ಪ್ರಾಣ ಕೊಡುವವರಿದ್ದಾರೆ. ಇವರೆಲ್ಲರೂ ಯುದ್ಧಕುಶಲರು. ೯

ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ

ಭೀಷ್ಮನ ಮೂಲಕ ರಕ್ಷಿತವಾದ ನಮ್ಮ ಸೇನೆಯ ಬಲವು ಅಪೂರ್ಣವಾಗಿದೆ. ಆದರೆ ಭೀಮನ ಮುಖಾಂತರ ರಕ್ಷಿತವಾದ ಅವರ ಸೈನ್ಯವು ಪೂರ್ಣವಾಗಿದೆ. ೧೦

ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ

ಆದುದರಿಂದ ತಾವೆಲ್ಲರೂ ತಮ್ಮ ತಮ್ಮ ಸ್ಥಾನಗಳಿಂದ ಎಲ್ಲಾ ಮಾರ್ಗದಿಂದಲೂ ಪಿತಾಮಹ ಭೀಷ್ಮನಿಗೆ ಒಳ್ಳೆಯ ರೀತಿಯಲ್ಲಿ ರಕ್ಷಣೆ ಮಾಡಿರಿ. (ಹೀಗೆ ದುರ್ಯೋಧನನು ನುಡಿದನು.) ೧೧

ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್

ಅವನನ್ನು ಆನಂದಗೊಳಿಸುತ್ತಾ ಕುರುವೃದ್ಧ ಪ್ರತಾಪವಂತ ಪಿತಾಮಹನು ಉಚ್ಚಸ್ವರದಿಂದ ಸಿಂಹನಾದ ಮಾಡಿ ಶಂಖವನ್ನೂದಿದನು. ೧೨

ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್

ಕೂಡಲೆ ಶಂಖ, ನಗಾರಿ, ಢೋಲು, ಮೃದಂಗ, ರಣಭೇರಿ, ಇವೆಲ್ಲಾ ಒಮ್ಮೆಯೇ ಭೋರ್ಗರೆದುವು. ಈ ನಾದವು ಭಯಂಕರವಾಗಿದ್ದಿತು. ೧೩

ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ

ಇಷ್ಟರಲ್ಲಿ ಬಿಳಿ ಕುದುರೆಗಳ ದೊಡ್ಡ ರಥದಲ್ಲಿ ಕುಳಿತುಕೊಂಡಿದ್ದ ಶ್ರೀ ಕೃಷ್ಣನೂ ಅರ್ಜುನನೂ ದಿವ್ಯ ಶಂಖಗಳನ್ನು ಊದಿದರು.* ೧೪

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥

ಶ್ರೀಕೃಷ್ಣನು ಪಾಂಚಜನ್ಯವೆಂಬ ಶಂಖವನ್ನೂದಿದನು. ಧನಂಜಯ (ಅರ್ಜುನ) ನು ದೇವದತ್ತವೆಂಬ ಶಂಖವನ್ನೂದಿದನು.

ಭಯಂಕರ ಕರ್ಮಗಳನ್ನೆಸಗುವ ಭೀಮನು ಪೌಂಡ್ರನಾಮಕ ಶಂಖ
ವನ್ನೂದಿದನು ೧೫

ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ

ಕುಂತೀಪುತ್ರನಾದ ರಾಜಾ ಯುಧಿಷ್ಠಿರನು ಅನಂತವಿಜಯ
ವೆಂಬ ಹೆಸರಿನ ಶಂಖವನ್ನೂದಿದನು. ನಕುಲನು ಸುಘೋಷವೆಂಬ
ಹೆಸರಿನ ಶಂಖವನ್ನೂ ಸಹದೇವನು ಮಣಿಪುಷ್ಪಕವೆಂಬ ಹೆಸರಿನ
ಶಂಖವನ್ನೂ ಊದಿದರು. ೧೬

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ

ದೊಡ್ಡ ಬಿಲ್ಲನ್ನುಳ್ಳ ಕಾಶಿರಾಜ, ಮಹಾರಥಿಯಾದ ಶಿಖಂಡಿ,
ಧೃಷ್ಟದ್ಯುಮ್ನ, ವಿರಾಟರಾಜ, ಅಜೇಯನಾದ ಸಾತ್ಯಕಿ, ೧೭

ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್

ದ್ರುಪದರಾಜ, ದ್ರೌಪದಿಯ ಪುತ್ರರು, ಮಹಾಬಾಹುವಾದ
ಸುಭದ್ರಾಪುತ್ರ ಅಭಿಮನ್ಯು, ಇವರೆಲ್ಲರೂ, ಎಲೈ ರಾಜನೆ, ತಮ್ಮ
ತಮ್ಮ ಶಂಖಗಳನ್ನೂದಿದರು. ೧೮

ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್

ಪೃಥ್ವಿಯನ್ನೂ ಆಕಾಶವನ್ನೂ ಮಾರ್ದನಿಗೊಳಿಸುವ ಆ
ಭಯಂಕರ ನಾದವು ಕೌರವರ ಹೃದಯವನ್ನು ಸೀಳಿಬಿಟ್ಟಿತು.
೧೯

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ

ಎಲೈ ರಾಜನೆ, ಈ ಸಮಯದಲ್ಲಿ [ಕಪಿಧ್ವಜ] (ತನ್ನ ಧ್ವಜದಲ್ಲಿ ಹನುಮಂತನನ್ನುಳ್ಳ ಅರ್ಜುನ) ನು ಕೌರವ ಸೈನ್ಯವು ಸಜ್ಜುಗೊಂಡಿದ್ದುದನ್ನು ನೋಡಿ, ಆಯುಧವನ್ನು ಪ್ರಯೋಗಿಸಲು ಸಿದ್ಧವಾಗುವ ಹೊತ್ತಿನಲ್ಲಿ ತನ್ನ ಬಿಲ್ಲನ್ನೇರಿಸಿ ಹೃಷೀಕೇಶನಿಗೆ ಈ ಮಾತನ್ನು ಹೇಳಿದನು: 'ಅಚ್ಯುತನೇ, ನನ್ನ ರಥವನ್ನು ಎರಡು ಸೇನೆಗಳ ಮಧ್ಯದಲ್ಲಿ ನಿಲ್ಲಿಸು; ೨೦-೨೧

ಅರ್ಜುನ ಉವಾಚ—

ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ರಣಸಮುದ್ಯಮೇ

ಇದರಿಂದ [ಹಾಗೆ ನಿಲ್ಲಿಸುವದರಿಂದ] ಯುದ್ಧಮಾಡಬೇಕೆಂಬ ಇಚ್ಛೆಯಿಂದ ನಿಂತಿರುವ ಜನರನ್ನು ನಾನು ನೋಡುವೆನು ಮತ್ತು ಈ ರಣಸಂಗ್ರಾಮದಲ್ಲಿ ನಾನು ಯಾರೊಡನೆ ಹೋರಾಡಬೇಕೆಂಬುದನ್ನು ತಿಳಿದುಕೊಳ್ಳುವೆನು; ೨೨

ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ

ದುರ್ಬುದ್ಧಿ ದುರ್ಯೋಧನನಿಗೆ ಯುದ್ಧದಲ್ಲಿ ಹಿತವೆಸಗಬೇಕೆಂಬ ಇಚ್ಛೆಯುಳ್ಳ ಯಾವ ಯೋಧರು ಇಲ್ಲಿ ಒಟ್ಟುಗೂಡಿದ್ದಾರೊ ಅವರನ್ನು ನಾನು ನೋಡುವೆನು.' ೨೩

ಸಂಜಯ ಉವಾಚ—

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ
ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ
ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ ಕುರೂನಿತಿ

ಸಂಜಯನು ಹೇಳಿದನು—

ಎಲೈ ರಾಜನೆ, ಅರ್ಜುನನು ಶ್ರೀಕೃಷ್ಣನಿಗೆ [ಹೀಗೆ] ಹೇಳಿದೊಡನೆ ಶ್ರೀಕೃಷ್ಣನು ಎರಡು ಸೇನೆಗಳ ಮಧ್ಯೆ ಸಮಸ್ತ ರಾಜರ

ಮತ್ತು ಭೀಷ್ಮದ್ರೋಣರ ಸಮ್ಮುಖದಲ್ಲಿ ಉತ್ತಮ ರಥವನ್ನು ನಿಲ್ಲಿಸಿ ಹೇಳಿದನು—

'ಹೇ ಪಾರ್ಥ, ಇಲ್ಲಿ ನೆರೆದಿರುವ ಈ ಕೌರವರನ್ನು ನೋಡು.'

೨೪-೨೫

ತತ್ರಾಪಶ್ಯತ್‌ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್
ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ
ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ
ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್
ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್

ಅಲ್ಲಿ ಎರಡು ಸೇನೆಗಳಲ್ಲಿಯೂ ಇದ್ದ ಹಿರಿಯರು, ವೃದ್ಧರು, ಪಿತಾಮಹರು, ಆಚಾರ್ಯರು, ಸೋದರಮಾವ, ಸಹೋದರ, ಪುತ್ರ, ಪೌತ್ರ, ಮಿತ್ರ, ಮಾವ, ಇಷ್ಟರ, ಇವರೆಲ್ಲರನ್ನೂ ಅರ್ಜುನನು ನೋಡಿದನು. ಈ ಬಾಂಧವರೆಲ್ಲರೂ ನಿಂತಿರುವದನ್ನು ನೋಡಿ ಖೇದಪ್ರಪನ್ನನಾದುದರಿಂದ ದೈನ್ಯವನ್ನೈದಿದ ಕುಂತೀಪುತ್ರನಿಂತೆಂದನು.

೨೬--೨೮

ಅರ್ಜುನ ಉವಾಚ—

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ

ಅರ್ಜುನನು ಹೇಳಿದನು—

ಹೇ ಕೃಷ್ಣ, ಯುದ್ಧಗೈಯುವ ಇಚ್ಛೆಯಿಂದ ಇಲ್ಲಿ ಒಟ್ಟುಗೂಡಿರುವ ಈ ಸ್ವಜನರನ್ನು ನೋಡಿ ನನ್ನ ಅಂಗಗಳು ಶಿಥಿಲವಾಗುತ್ತಿವೆ, ಬಾಯೊಣಗುತ್ತಿದೆ, ಶರೀರದಲ್ಲಿ ನಡುಕವು ತೋರಿಬರುತ್ತಿದೆ ಮತ್ತು ರೋಮಾಂಚವುಂಟಾಗುತ್ತಿದೆ. ೨೮,೨೯

ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ

ಕೈಯಿಂದ ಗಾಂಡೀವವು ಜಾರುತ್ತಿದೆ, ಚರ್ಮವು ಉರಿದೇಳು ತ್ತಿದೆ. ನಾನು ನಿಂತುಕೊಂಡಿರಲಾರೆನು. ಏಕೆಂದರೆ ನನ್ನ ಬುದ್ಧಿಯು ಭ್ರಮಿಸುತ್ತಿರುವಂತೆ ತೋರುತ್ತದೆ. ೩೦

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ

ಇದಲ್ಲದೆ, ಹೇ ಕೇಶವ, ಅಶುಭ ಚಿಹ್ನೆಗಳನ್ನು ನೋಡುತ್ತಿದ್ದೇನೆ. ಯುದ್ಧದಲ್ಲಿ ಸ್ವಜನರನ್ನು ಕೊಲ್ಲುವದರಲ್ಲಿ ನನಗೆ ಯಾವ ಶ್ರೇಯಸ್ಸೂ ಕಾಣುವದಿಲ್ಲ. ೩೧

ನಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ

ಅವರನ್ನು ಕೊಂದು ನಾನು ವಿಜಯವನ್ನಿಚ್ಛಿಸುವದಿಲ್ಲ. ನನಗೆ ರಾಜ್ಯವೂ ಬೇಡ, ಸುಖವೂ ಬೇಡ. ಗೋವಿಂದನೆ, ರಾಜ್ಯದಿಂದಾಗಲಿ, ಭೋಗದಿಂದಾಗಲಿ, ಜೀವನದಿಂದಾಗಲಿ ನನಗೇನು ? ೩೨

ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ

ನಾವು ಯಾರಿಗೋಸ್ಕರ ರಾಜ್ಯ, ಭೋಗ, ಸುಖಗಳನ್ನು ಬಯಸಿದೆವೋ ಅವರೇ—ಆಚಾರ್ಯರು, ಚಿಕ್ಕಪ್ಪಂದಿರು, ಮಕ್ಕಳು, ಅಜ್ಜಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು ಮತ್ತು ಇತರ ಸ್ವಜನರನೇಕರು--ಜೀವನದ ಮತ್ತು ಧನದ ಆಸೆಯನ್ನು ತೊರೆದು ಯುದ್ಧಕ್ಕಾಗಿ ನಿಂತಿದ್ದಾರೆ. ೩೩,೩೪

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ

ಈ ಜನರು ನನ್ನನ್ನು ಕೊಂದರೂ ಅಥವಾ ನನಗೆ ಮೂರು ಲೋಕಗಳ ಆಳ್ವಿಕೆಯು ಲಭಿಸಿದರೂ, ಹೇ ಮಧುಸೂದನ, ನಾನು ಅವರನ್ನು ಕೊಲ್ಲಬಯಸುವದಿಲ್ಲ. ಹೀಗಿರುವಾಗ ನಾನು ಒಂದು ತುಂಡು ನೆಲಕ್ಕಾಗಿ ಇವರನ್ನೇಕೆ ಕೊಲ್ಲಲಿ? ೩೫

ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ

ಹೇ ಜನಾರ್ದನ, ಧೃತರಾಷ್ಟ್ರನ ಮಕ್ಕಳನ್ನು ಕೊಂದರೆ ನನಗುಂಟಾಗುವ ಆನಂದವೇನು? ಈ ಮಹಾಪಾಪಿಗಳನ್ನು ಕೊಂದರೆ ಕೂಡ ನಮಗೆ ಪಾಪವೇ ಅಂಟುವುದು. ೩೬

ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ

ಆದುದರಿಂದ, ಮಾಧವ, ನಮ್ಮ ಸ್ವಂತ ಬಂಧುಗಳೇ ಆದ ಧೃತರಾಷ್ಟ್ರನ ಪುತ್ರರನ್ನು ಕೊಲ್ಲುವದು ನಮಗೆ ಉಚಿತವಲ್ಲ. ಸ್ವಜನರನ್ನೇ ಕೊಂದು ಸುಖಿಗಳಾಗುವದೆಂತು? ೩೭

ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ
ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ

ಲೋಭದಿಂದ ಮಲಿನವಾದ ಚಿತ್ತವುಳ್ಳವರು ಈ ಕುಲನಾಶದಿಂದುಂಟಾಗುವ ದೋಷವನ್ನೂ ಮಿತ್ರದ್ರೋಹದ ಪಾಪವನ್ನೂ ನೋಡಲಾರದೆ ಇರಬಹುದಾದರೂ, ಜನಾರ್ದನನೆ, ಕುಲನಾಶದಿಂದೊದಗುವ ದೋಷವನ್ನರಿಯಬಲ್ಲವರಾದ ನಾವು ಪಾಪದಿಂದ ಪಾರಾಗುವದನ್ನು ತಿಳಿಯೆವೆಂತು? ೩೮,೩೯

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ

ಕುಲನಾಶದಿಂದ ಸನಾತನ ಕುಲಧರ್ಮವು ನಾಶವಾಗುತ್ತದೆ. ಧರ್ಮನಾಶದಿಂದ ಅಧರ್ಮವು ಇಡೀ ಕುಲವನ್ನು ಮುಳುಗಿಸಿಬಿಡುತ್ತದೆ. ೪೦

ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ

ಹೇ ಕೃಷ್ಣ, ಅಧರ್ಮದ ವೃದ್ಧಿಯಿಂದ ಕುಲಸ್ತ್ರೀಯರು ಕೆಟ್ಟುಹೋಗುತ್ತಾರೆ. ಅವರು ಕೆಟ್ಟುಹೋಗುವದರಿಂದ ವರ್ಣಸಂಕರವುಂಟಾಗುತ್ತದೆ. ೪೧

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ

ಇಂತಹ ಸಂಕರದಿಂದ ಕುಲಘಾತಕನಿಗೂ ಅವನ ಕುಲಕ್ಕೂ ನರಕವಾಸವಾಗುತ್ತದೆ. ಪಿಂಡೋದಕ ಕ್ರಿಯೆಯು ತಪ್ಪಿಹೋಗುವದರಿಂದ ಅವನ ಪಿತೃಗಳಿಗೆ ದುರ್ದೆಸೆಯೊದಗುತ್ತದೆ. ೪೨

ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ

ಈ ವರ್ಣಸಂಕರವನ್ನುಂಟುಮಾಡುವ ಕುಲಘಾತಕ ಜನರ ದೋಷಗಳಿಂದ ಸನಾತನ ಜಾತಿಧರ್ಮಕುಲಧರ್ಮಗಳು ನಾಶವನ್ನೈದುತ್ತವೆ. ೪೩

ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ

ಹೇ ಜನಾರ್ದನ, ಯಾವನ ಕುಲಧರ್ಮವು ನಾಶವಾಗಿದೆಯೊ ಅಂತಹ ಮನುಷ್ಯನಿಗೆ ಅವಶ್ಯವಾಗಿ ನರಕವಾಸವಾಗುತ್ತದೆ. ಇದನ್ನು ನಾವು ಕೇಳುತ್ತಾ ಬಂದಿರುವೆವು ೪೪

ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ

ಅಯ್ಯೋ, ನಾವು ಮಹಾಪಾಪಗೈಯಲು ಸಿದ್ಧರಾಗಿಬಿಟ್ಟಿರುವದು—ರಾಜ್ಯಸುಖದ ಲೋಭದಿಂದ ಸ್ವಜನರನ್ನು ಕೊಲ್ಲಲು ಸಿದ್ಧರಾಗಿರುವದು—ಎಂತಹ ದುಃಖಕರ ವಿಷಯ ! ೪೫

ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್

ನಿಶ್ಶಸ್ತ್ರನಾಗಿಯೂ ಇದಿರಿಸಿ ಹೋರಾಡದೆಯೂ ಇರುವ ನನ್ನನ್ನು ಶಸ್ತ್ರಧಾರಿಗಳಾದ ಧೃತರಾಷ್ಟ್ರನ ಮಕ್ಕಳು ರಣದಲ್ಲಿ ಕೊಂದುಬಿಟ್ಟರೆ ನನಗೆ ಅತ್ಯಂತ ಕಲ್ಯಾಣಕರವಾಗುವುದು. ೪೬

ಸಂಜಯ ಉವಾಚ—

ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ

ಸಂಜಯನು ಹೇಳಿದನು—

ಇಷ್ಟು ಹೇಳಿ ರಣದಲ್ಲಿ ಶೋಕದಿಂದ ವ್ಯಥಿತಚಿತ್ತನಾದ ಅರ್ಜುನನು ಬಿಲ್ಲುಬಾಣಗಳನ್ನೊಗೆದು ರಥದ ಹಿಂಭಾಗದಲ್ಲಿ ಕುಳಿತುಬಿಟ್ಟನು. ೪೭

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಅರ್ಜುನವಿಷಾದಯೋಗವೆಂಬ ಮೊದಲನೆಯ ಅಧ್ಯಾಯವು ಸಮಾಪ್ತವು.



# ಸಾಂಖ್ಯಯೋಗ



ಮೋಹವಶನಾದ ಮನುಷ್ಯನು ಅಧರ್ಮ ವನ್ನು ಧರ್ಮವೆಂದೆಣಿಸುತ್ತಾನೆ. ಮೋಹದ ಕಾರಣ ಅರ್ಜುನನು ತನ್ನದು ಪರರದು ಎಂಬ ಭೇದವನ್ನು ಮಾಡಿದನು. ಈ ಭೇದವು ಮಿಥ್ಯವೆಂಬುದನ್ನು ತೋರಿಸುತ್ತಾ ಶ್ರೀಕೃಷ್ಣನು ದೇಹ ಮತ್ತು ಆತ್ಮ, ಇವುಗಳ ಭಿನ್ನತೆಯನ್ನೂ ದೇಹದ ಅನಿತ್ಯತೆಯನ್ನೂ ಪಾರ್ಥಕ್ಯ [ಬೇರೆಯಿರುವದು, ಒಂಟಿಯಾಗಿರು ವದು]ವನ್ನೂ ಆತ್ಮನ ನಿತ್ಯತೆಯನ್ನೂ ಏಕತೆಯನ್ನೂ ಸಿದ್ಧಾಂತಪಡಿಸುತ್ತಾನೆ. ಮನುಷ್ಯನು ಪುರುಷಾ ರ್ಥಕ್ಕೆ ಮಾತ್ರ ಅಧಿಕಾರಿಯು, ಪರಿಣಾಮಕ್ಕಲ್ಲ. ಆದುದರಿಂದ ಅವನು ತನ್ನ ಕರ್ತವ್ಯವನ್ನು ನಿಶ್ಚ ಯಿಸಿ ನಿಶ್ಚಿಂತೆಯ ಭಾವದಿಂದ ಅದರಲ್ಲಿ ತೊಡಗಿ ಇರಬೇಕು. ಈ ರೀತಿಯ [ಕರ್ತವ್ಯ—] ಪರಾಯಣತೆ ಯಿಂದ ಅವನು ಮೋಕ್ಷವನ್ನು ಸಂಪಾದಿಸಬಲ್ಲನು.

**ಸಂಜಯ ಉವಾಚ—**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ**

ಸಂಜಯನೆಂದನು—

ಈ ರೀತಿಯಾಗಿ ಕರುಣೆಯಿಂದ ದೀನನಾಗಿ ಅಶ್ರುಪೂರ್ಣ ವ್ಯಾಕುಲನೇತ್ರಗಳುಳ್ಳವನಾಗಿ ದುಃಖಿಸುತ್ತಿದ್ದ ಅರ್ಜುನನಿಗೆ ಮಧುಸೂದನನಿಂತೆಂದನು. ೧

ಶ್ರೀ ಭಗವಾನುವಾಚ—

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ

ಶ್ರೀ ಭಗವಂತನು ಹೇಳಿದನು—

ಅರ್ಜುನನೆ, ಶ್ರೇಷ್ಠ ಪುರುಷರಿಗೆ ಯೋಗ್ಯವಲ್ಲದ, ಸ್ವರ್ಗದಿಂದ ವಿಮುಖಗೈವ, ಅಪಯಶಸ್ಸನ್ನೀವ ಈ ಮೋಹವು ನಿನಗೆ ಈ ವಿಷಮ ಕಾಲದಲ್ಲಿ ಎಲ್ಲಿಂದ ಬಂದು ಅಂಟಿತು? ೨

ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ

ಹೇ ಪಾರ್ಥ, ನೀನು ನಾಮರ್ದನಾಗಬೇಡ! ಇದು ನಿನಗೆ ಶೋಭಿಸುವದಿಲ್ಲ. ಹೃದಯದ ಈ ಪಾಮರ ನಿರ್ಬಲತೆಯನ್ನು ತ್ಯಜಿಸಿ, ಎಲೈ ಪರಂತಪನೆ, ನೀನು ಎದ್ದು ನಿಲ್ಲು. ೩

ಅರ್ಜುನ ಉವಾಚ—

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ

ಅರ್ಜುನನೆಂದನು—

ಹೇ ಮಧುಸೂದನ, ಭೀಷ್ಮದ್ರೋಣರನ್ನು ನಾನು ರಣಭೂಮಿಯಲ್ಲಿ ಬಾಣಗಳಿಂದ ಹೇಗೆ ಹೊಡೆಯಲಿ? ಅರಿಸೂದನನೆ, ಇವರಾದರೊ ಪೂಜ್ಯರು. ೪

ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋ ಭೋಕ್ತುಂ
ಭೈಕ್ಷ್ಯಮಪೀಹ ಲೋಕೇ
ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯ ಭೋಗಾನ್
ರುಧಿರಪ್ರದಿಗ್ಧಾನ್

ಮಹಾನುಭಾವರಾದ ಗುರುಜನರನ್ನು ಕೊಲ್ಲದಿದ್ದು ಈ ಲೋಕದಲ್ಲಿ ಭಿಕ್ಷಾನ್ನವನ್ನು ತಿನ್ನುವದು ಕೂಡ ಒಳಿತು; ಏಕೆಂದರೆ ಗುರುಜನರನ್ನು ಕೊಂದಮೇಲಂತೂ ನಾನು ನೆತ್ತರುಕಲೆಯ ಅರ್ಥಕಾಮರೂಪ ಭೋಗಗಳನ್ನೇ ಭೋಗಿಸಬೇಕಾಗುವುದು. ೫

ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ
ಯದಿ ವಾ ನೋ ಜಯೇಯುಃ
ಯಾನೇವ ಹತ್ವಾ ನ ಜಿಜೀವಿಷಾಮಸ್ತೇವಸ್ಥಿತಾಃ
ಪ್ರಮುಖೇ ಧಾರ್ತರಾಷ್ಟ್ರಾಃ

ನಾವು ಅವರನ್ನು ಗೆಲ್ಲುವದೊಳಿತೊ ಅವರು ನಮ್ಮನ್ನು ಗೆಲ್ಲುವದೊಳಿತೊ ನನಗೆ ತಿಳಿಯುವದಿಲ್ಲ. ಯಾರನ್ನು ಕೊಂದು ನಾನು ಜೀವಿಸಲಿಚ್ಛಿಸುವದಿಲ್ಲವೊ ಅವರು—ಧೃತರಾಷ್ಟ್ರನ ಮಕ್ಕಳು—ಇದಿರಿಗೆ ನಿಂತಿದ್ದಾರೆ. ೬

ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ
ಧರ್ಮಸಂಮೂಢಚೇತಾಃ
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ
ಶಾಧಿ ಮಾಂ ತ್ವಾಂ ಪ್ರಪನ್ನಂ

ಹೇಡಿತನದಿಂದ ನನ್ನ ವೃತ್ತಿಯು ಕಂದಿಹೋಗಿದೆ. ನಾನು ಕರ್ತವ್ಯಮೂಢನಾಗಿಬಿಟ್ಟಿದ್ದೇನೆ. ಆದುದರಿಂದ ಏತರಲ್ಲಿ ನನಗೆ ಹಿತವುಂಟೆಂಬುದನ್ನು ನಿಶ್ಚಯಪೂರ್ವಕವಾಗಿ ಹೇಳಬೇಕೆಂದು ಪ್ರಾರ್ಥಿಸುತ್ತೇನೆ. ನಾನು ನಿನ್ನ ಶಿಷ್ಯನಾಗಿದ್ದೇನೆ. ನಿನ್ನನ್ನು ಶರಣು ಹೊಕ್ಕಿದ್ದೇನೆ. ನನಗೆ ದಾರಿತೋರಿಸು. ೭

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್ ಯಚ್ಛೋಕಮುಚ್ಛೋ-
ಷಣಮಿನ್ದ್ರಿಯಾಣಾಂ
ಅವಾಪ್ಯ ಭೂಮಾವಸಪತ್ನಮೃದ್ಧಂ ರಾಜ್ಯಂ
ಸುರಾಣಾಮಪಿ ಚಾಧಿಪತ್ಯಂ

ಈ ಲೋಕದಲ್ಲಿ ಧನಧಾನ್ಯಸಂಪನ್ನವಾದ ನಿಷ್ಕಂಟಕವಾದ ರಾಜ್ಯವಾಗಲಿ ಅಥವಾ ಇಂದ್ರಾಸನವೇ ಆಗಲಿ ಲಭಿಸಿದರೂ ಇಂದ್ರಿಯಗಳ ತ್ರಾಣವನ್ನು ಹೀರುವ ನನ್ನ ಈ ಶೋಕವನ್ನು ದೂರಮಾಡುವ ಯಾವ ವಸ್ತುವೂ ಅದರಲ್ಲಿರುವದು ನನಗೆ ಕಾಣಬರುವದಿಲ್ಲ. ೮

ಸಂಜಯ ಉವಾಚ—

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ
ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ

ಸಂಜಯನೆಂದನು—

ರಾಜನೆ, ಗುಡಾಕೇಶನಾದ ಅರ್ಜುನನು ಹೃಷೀಕೇಶನಾದ ಗೋವಿಂದನಿಗೆ ಮೇಲೆ ತಿಳಿಸಿದ ರೀತಿಯಲ್ಲಿ ಹೇಳಿ 'ನಾನು ಕದನ ಮಾಡುವದಿಲ್ಲ' ಎಂದುಸುರಿ ಸುಮ್ಮನಾದನು. ೯

ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ

ಹೇ ಭಾರತ, ಇವೆರಡು ಸೈನ್ಯಗಳ ಮಧ್ಯೆ ಉದಾಸೀನನಾಗಿ ಕುಳಿತಿದ್ದ ಅರ್ಜುನನಿಗೆ ಮುಗುಳ್ನಗೆಯಿಂದ ಹೃಷೀಕೇಶನು ಈ ಮಾತುಗಳನ್ನಾಡಿದನು. ೧೦

ಶ್ರೀ ಭಗವಾನುವಾಚ —

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ

ಶ್ರೀ ಭಗವಂತನೆಂದನು—

ಶೋಕಿಸಲು ಯೋಗ್ಯವಲ್ಲದುದಕ್ಕೆ ನೀನು ಶೋಕಿಸುತ್ತೀಯೆ; ಪಾಂಡಿತ್ಯದ ಮಾತನ್ನು ನುಡಿಯುತ್ತೀಯೆ; ಆದರೆ ಪಂಡಿತರು ಸತ್ತವರಿಗಾಗಲಿ ಬದುಕಿರುವವರಿಗಾಗಲಿ ಶೋಕಪಡುವದಿಲ್ಲ. ೧೧

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ

ಏಕೆಂದರೆ ವಾಸ್ತವವಾಗಿ ನೋಡಿದರೆ ನಾನು, ನೀನು ಅಥವಾ ಈ ರಾಜನು ಯಾವ ಕಾಲದಲ್ಲಿಯೂ ಇರಲಿಲ್ಲ, ಅಥವಾ ಮುಂದೆ ಇರುವದಿಲ್ಲ—ಹೀಗೇನೂ ಇಲ್ಲ. ೧೨

ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ

ದೇಹಧಾರಿಗೆ ಈ ಶರೀರದಲ್ಲಿ ಕೌಮಾರ, ಯೌವನ, ವೃದ್ಧಾಪ್ಯಗಳು ಪ್ರಾಪ್ತವಾಗುವಂತೆಯೇ ಅನ್ಯಶರೀರದ ಪ್ರಾಪ್ತಿಯೂ ಉಂಟಾಗುತ್ತದೆ. ಈ ವಿಷಯವಾಗಿ ಬುದ್ಧಿವಂತನಾದ ಪುರುಷನಿಗೆ ಮೋಹವುಂಟಾಗುವದಿಲ್ಲ. ೧೩

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ

ಹೇ ಕೌಂತೇಯ, ಇಂದ್ರಿಯಗಳ ಸ್ಪರ್ಶಗಳು ಶೀತ, ಉಷ್ಣ, ಸುಖ ಮತ್ತು ದುಃಖ, ಇವುಗಳನ್ನುಂಟುಮಾಡುವವಾಗಿರುತ್ತವೆ. ಅವು ಅನಿತ್ಯಗಳಾಗಿರುತ್ತವೆ. ಅವು ಬರುತ್ತವೆ, ಹೋಗುತ್ತವೆ. ಅವುಗಳನ್ನು ನೀನು ಸಹಿಸು. ೧೪

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ

ಪುರುಷಶ್ರೇಷ್ಠನೆ, ಸುಖದುಃಖಗಳಲ್ಲಿ ಒಂದೇ ಸಮನಾಗಿ ವರ್ತಿಸುವ ಯಾವ ಧೀಮಂತನಾದ ಪುರುಷನನ್ನು ಈ ವಿಷಯಗಳು ವ್ಯಾಕುಲನನ್ನಾಗಿ ಮಾಡುವದಿಲ್ಲವೋ ಅವನು ಮೋಕ್ಷಕ್ಕೆ ಯೋಗ್ಯನಾಗುತ್ತಾನೆ. ೧೫

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ
ಉಭಯೋರಪಿ ದೃಷ್ಟೋಽಂತಸ್ತ್ವನ ಯೋಸ್ತತ್ತ್ವದರ್ಶಿಭಿಃ

ಅಸತ್ತಿಗೆ ಅಸ್ತಿತ್ವವಿಲ್ಲ, ಸತ್ತಿಗೆ ನಾಶವಿಲ್ಲ. ಇವೆರಡರ ನಿರ್ಣಯವನ್ನು ಜ್ಞಾನಿಗಳು ಬಲ್ಲರು. ೧೬

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ

ಯಾವದರಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆಯೊ ಅದನ್ನು ನೀನು ಅವಿನಾಶಿಯೆಂದರಿಯಬೇಕು. ಈ ಅವ್ಯಯವನ್ನು ಯಾರೂ ನಾಶಪಡಿಸಲು ಸಮರ್ಥರಲ್ಲ. ೧೭

ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ

ನಿತ್ಯವಾಗಿರುವ, ಅಳತೆಗೆ ಸಿಲುಕದ, ಅವಿನಾಶಿಯಾದ ದೇಹಿಯ ಈ ದೇಹಗಳು ನಾಶಕ್ಕೀಡಾದವುಗಳೆಂದು ಹೇಳಿದ್ದಾರೆ. ಆದುದರಿಂದ, ಎಲೈ ಭಾರತನೆ, ನೀನು ಯುದ್ಧ ಮಾಡು. ೧೮

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ

ಇದು ಕೊಲ್ಲುವದು ಎಂದು ತಿಳಿಯುವವರಿಗೂ ಕೊಲ್ಲಲ್ಪಡುವದು ಇದು ಎಂದು ಅರಿಯುವರಿಗೂ — ಈ ಇಬ್ಬರಿಗೂ ಏನೂ ಗೊತ್ತಿಲ್ಲ. ಇದು (ಆತ್ಮವು) ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂ ಇಲ್ಲ. ೧೯

ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾ ಭವಿತಾ
ವಾ ನ ಭೂಯಃ
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ
ಶರೀರೇ

ಇದು ಎಂದೂ ಹುಟ್ಟುವದಿಲ್ಲ, ಸಾಯುವದಿಲ್ಲ. ಇದು ಇದ್ದಿತು, ಮುಂದೆ ಇರುವದಿಲ್ಲ, ಎಂಬುದು ಕೂಡ ವಾಸ್ತವವಲ್ಲ. ಆದುದರಿಂದ ಇದು ಜನ್ಮರಹಿತವಾದುದು, ನಿತ್ಯವಾದುದು, ಶಾಶ್ವತವಾದುದು, ಪುರಾತನವಾದುದು; ಶರೀರದ ನಾಶವಾಗುವದರಿಂದ ಅದರ ನಾಶವಾಗುವದಿಲ್ಲ. ೨೦

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ

ಹೇ ಪಾರ್ಥ, ಯಾವನು ಆತ್ಮವು ಅವಿನಾಶಿಯು, ನಿತ್ಯವು, ಜನ್ಮವಿಲ್ಲದುದು, ಎಂದೆಣಿಸುತ್ತಾನೊ ಅವನು ಯಾರನ್ನೇ ಆಗಲಿ ಕೊಲ್ಲಿಸು [ಅಥವಾ ಹೊಡೆಸು] ವದೆಂತು ಅಥವಾ ಕೊಲ್ಲುವದು [ಅಥವಾ ಹೊಡೆಯುವದು] ಯಾರನ್ನು ? ೨೧

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ

ಮನುಷ್ಯನು ಹಳೆ ಅರಿವೆಗಳನ್ನು ಬಿಟ್ಟು ಹೊಸವನ್ನು ತೊಡ್ಡುವಂತೆ ದೇಹಧಾರಿಯು ಜೀರ್ಣವಾದ ದೇಹವನ್ನು ತ್ಯಜಿಸಿ ಬೇರೆ ಹೊಸ ದೇಹವನ್ನು ಪಡೆಯುತ್ತದೆ. ೨೨

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ

ಇದನ್ನು (ಆತ್ಮವನ್ನು) ಶಸ್ತ್ರಗಳು ಕತ್ತರಿಸುವದಿಲ್ಲ, ಬೆಂಕಿಯು ಸುಡುವದಿಲ್ಲ, ನೀರು ತೋಯಿಸುವದಿಲ್ಲ. ಗಾಳಿಯು ಒಣಗಿಸುವದಿಲ್ಲ. ೨೩

ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ

ಇದು ಕತ್ತರಿಸಲ್ಪಡಲಾರದು, ಸುಡಲ್ಪಡಲಾರದು, ತೋಯಿಸಲ್ಪಡಲಾರದು, ಒಣಗಿಸಲ್ಪಡಲಾರದು. ಇದು ನಿತ್ಯವಾದುದು,

ಎಲ್ಲದರಲ್ಲಿಯೂ ಇರುವದು, ಸ್ಥಿರವಾದುದು, ಅಚಲವಾದುದು ಮತ್ತು ಸನಾತನವಾದುದು. ೨೪

ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ

ಮತ್ತು ಇದು ಇಂದ್ರಿಯಕ್ಕೂ ಮನಕ್ಕೂ ಅಗಮ್ಯವಾದುದು, ವಿಕಾರವಿಲ್ಲದುದು ಎಂದು ಹೇಳಿದ್ದಾರೆ. ಆದುದರಿಂದ ಇದು ಹಾಗಿರುವದನ್ನರಿತು ನೀನು ಶೋಕಿಸುವದುಚಿತವಲ್ಲ. ೨೫

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ
ತಥಾಪಿ ತ್ವಂ ಮಹಾಬಾಹೋ ನೈನಂ ಶೋಜಿತುಮರ್ಹಸಿ

ಅಥವಾ ನೀನು ಇದು ನಿತ್ಯವೂ ಹುಟ್ಟಿ ನಿತ್ಯವೂ ಸಾಯುವದೆಂದೆಣಿಸಿದರೂ ಕೂಡ ನೀನು ಇದಕ್ಕಾಗಿ ಶೋಕಪಡುವದು ಉಚಿತವಲ್ಲ. ೨೬

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ

ಹುಟ್ಟುವವರಿಗೆ ಸಾವೂ ಸಾಯುವವರಿಗೆ ಹುಟ್ಟೂ ತಪ್ಪತಕ್ಕವಲ್ಲ. ಆದುದರಿಂದ ಅನಿವಾರ್ಯವಾದವುಗಳಿಗಾಗಿ ಶೋಕಿಸುವದು ಉಚಿತವಲ್ಲ. ೨೭

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ

ಹೇ ಭಾರತ, ಪ್ರತಿಯೊಂದು ಭೂತದ ಜನ್ಮದ ಮುಂಚಿನ, ಮತ್ತು ಮೃತ್ಯುವಾದ ಮೇಲಿನ, ಅವಸ್ಥೆಯು ನೋಟಕ್ಕೆ ಸಿಕ್ಕುವದಿಲ್ಲ; ಮಧ್ಯದ ಸ್ಥಿತಿ ಮಾತ್ರವೇ ವ್ಯಕ್ತವಾಗುತ್ತದೆ. ಇದರಲ್ಲಿ ಚಿಂತೆಗಿರುವ ಕಾರಣವೇನು ? ೨೮

**ಟಿಪ್ಪಣಿ**—ಭೂತ ಎಂದರೆ ಸ್ಥಾವರ ಜಂಗಮಸೃಷ್ಟಿ.

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ
ಕಶ್ಚಿತ್

ಕೆಲವರು ಇದನ್ನು [ಆತ್ಮವನ್ನು] ಆಶ್ಚರ್ಯಸಮಾನವಾಗಿ ಕಾಣುತ್ತಾರೆ ; ಇನ್ನು ಕೆಲವರು ಅದನ್ನು ಆಶ್ಚರ್ಯಸಮಾನವೆಂದು ವರ್ಣಿಸುತ್ತಾರೆ; ಇನ್ನೂ ಇತರರು ಅದನ್ನು ಆಶ್ಚರ್ಯಸಮಾನವಾಗಿ ವರ್ಣಿಸುವದನ್ನು ಕೇಳುತ್ತಾರೆ; ಆದರೆ ಕೇಳಿದ ಮೇಲೆ ಕೂಡ ಯಾರೂ ಅದನ್ನು ಅರಿಯುವದಿಲ್ಲ. ೨೯

ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ

ಎಲೈ ಭಾರತನೆ, ಎಲ್ಲರ ದೇಹದಲ್ಲಿಯೂ ಇರುವ ಈ ದೇಹಧಾರಿಯಾದ ಆತ್ಮವು ನಿತ್ಯವಾದುದು, ಕೊಲೆಗೆ ಸಿಕ್ಕುವದಲ್ಲ; ಆದುದರಿಂದ ನೀನು ಭೂತಮಾತ್ರಗಳ ವಿಷಯದಲ್ಲಿ ಶೋಕಿಸುವದುಚಿತವಲ್ಲ. ೩೦

ಟಿಪ್ಪಣಿ—ಇಲ್ಲಿಯವರೆಗೆ ಶ್ರೀಕೃಷ್ಣನು ಬುದ್ಧಿ ಪ್ರಯೋಗದಿಂದ ಆತ್ಮದ ನಿತ್ಯತೆಯನ್ನೂ ದೇಹದ ಅನಿತ್ಯತೆಯನ್ನೂ ತಿಳಿಯಹೇಳಿ ಯಾವದೊಂದು ಸ್ಥಿತಿಯಲ್ಲಿ ದೇಹವನ್ನು ನಾಶಮಾಡುವದು ಉಚಿತವೆಂದೆನಿಸಲ್ಪಟ್ಟರೆ ಸ್ವಜನ-ಪರಿಜನರೆಂದು ಭೇದಮಾಡಿ ಕೌರವರು ನೆಂಟರಾದುದರಿಂದ ಇವರನ್ನು ಕೊಲ್ಲುವದೆಂತೆಂದು ವಿಚಾರ ಮಾಡುವದು ಮೋಹಜನ್ಯವಾದುದೆಂದು ತೋರಿಸಿದ್ದಾನೆ. ಇನ್ನು ಕ್ಷತ್ರಿಯಧರ್ಮವೇನೆಂಬುದನ್ನು ಅರ್ಜುನನಿಗೆ ಬೋಧಿಸುತ್ತಾನೆ.

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ

ಸ್ವಧರ್ಮವೆಂದು ಅರಿತೂ ನೀನು ಮಿಜಿಮಿಜಿಗುಟ್ಟುವದು (ಸಂದೇಹಪಡುವದು) ಉಚಿತವಲ್ಲ. ಏಕೆಂದರೆ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಹೆಚ್ಚು ಶ್ರೇಯಸ್ಕರವಾದುದಿನ್ನಾವುದೂ ಇರಲಾಗುವದಿಲ್ಲ. ೩೧

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ

ಎಲೈ ಪಾರ್ಥನೆ, ತಾನಾಗಿ ತಾನೇ ಒದಗಿರುವ, ಸ್ವರ್ಗದ ಬಾಗಿಲೇ ತೆಗೆದುಬಿಟ್ಟಂತಿರುವ, ಇಂತಹ ಯುದ್ಧವಾದರೋ ಭಾಗ್ಯಶಾಲಿಗಳಾದ ಕ್ಷತ್ರಿಯರಿಗೆ ಮಾತ್ರ ಲಭಿಸುತ್ತದೆ. ೩೨

ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ

ಈ ಧರ್ಮಪ್ರಾಪ್ತವಾದ [ಧಾರ್ಮಿಕವಾಗಿ ಒದಗಿದ] ಯುದ್ಧವನ್ನು ಮಾಡದೆಹೋದರೆ, ನೀನು ಸ್ವಧರ್ಮವನ್ನೂ ಕೀರ್ತಿಯನ್ನೂ ಹಾಳುಮಾಡಿಕೊಂಡು ಪಾಪವನ್ನು ಗಳಿಸುವೆ. ೩೩

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಂ
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ

ಎಲ್ಲರೂ ಸದಾ ನಿನ್ನನ್ನು ನಿಂದಿಸುತ್ತಿರುವರು. ಮಾನವುಳ್ಳ ಮನುಷ್ಯನಿಗೆ ಅಪಕೀರ್ತಿಯು ಮರಣಕ್ಕಿಂತ ಕೇಡಾದುದು ೩೪

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ
ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ

ಯಾವ ಮಹಾರಥಿಗಳಿಂದ ನೀನು ಈಗ ಮನ್ನಣೆಯನ್ನು ಪಡೆದಿರುವೆಯೊ ಅವರೇ ನೀನು ಹೆದರಿ ರಣದಿಂದ ಓಡಿಹೋಗಿರುವೆಯೆಂದು ತಿಳಿದುಕೊಂಡು ನಿನ್ನನ್ನು ತುಚ್ಛನೆಂದೆಣಿಸುವರು. ೩೫

ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಂ

ಮತ್ತು ನಿನ್ನ ಶತ್ರುಗಳು ನಿನ್ನ ಬಲವನ್ನು ಹೀಯಾಳಿಸುತ್ತಾ ಆಡಬಾರದ ಅನೇಕ ಮಾತುಗಳನ್ನಾಡುವರು. ಇದಕ್ಕಿಂತ ಹೆಚ್ಚು ದುಃಖಕರವಾದುದಿನ್ನೇನಾದರೂ ಇರಬಲ್ಲದೆ? ೩೬

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ

ನೀನು ಕೊಲ್ಲಲ್ಪಟ್ಟರೆ ನಿನಗೆ ಸ್ವರ್ಗವು ದೊರಕುವದು. ನೀನು ಗೆದ್ದರೆ ಪೃಥ್ವಿಯನ್ನು ಭೋಗಿಸುವೆ ಆದುದರಿಂದ, ಹೇ ಕೌಂತೇಯ, ಕದನವಾಡಲು ನಿಶ್ಚಯಿಸಿ ನಿಂತುಕೋ. ೩೭

ಟಿಪ್ಪಣಿ—ಈ ಪ್ರಕಾರ ಭಗವಂತನು ಆತ್ಮದ ನಿತ್ಯತೆಯನ್ನೂ ದೇಹದ ಅನಿತ್ಯತೆಯನ್ನೂ ತೋರಿಸಿದನು. ಮತ್ತೆ ಸಹಜವಾಗಿ ಪ್ರಾಪ್ತವಾದ ಯುದ್ಧದಲ್ಲಿ ತೊಡಗುವದರಿಂದ ಕ್ಷತ್ರಿಯನ ಧರ್ಮಕ್ಕೆ ಬಾಧೆಯೇನೂ ಉಂಟಾಗುವದಿಲ್ಲವೆಂಬುದನ್ನೂ ತೋರಿಸಿದನು. ಈ ರೀತಿ ೩೧ನೆಯ ಶ್ಲೋಕದಿಂದ ಭಗವಂತನು ಪರಮಾರ್ಥದೊಡನೆ ಉಪಯೋಗವನ್ನೂ ಜೋಡಿಸಿದ್ದಾನೆ. ಇಷ್ಟು ಹೇಳಿದ ನೇಲೆ ಭಗವಂತನು ಗೀತೆಯ ಪ್ರಧಾನ ಉದ್ದೇಶವನ್ನು ಒಂದು ಶ್ಲೋಕದಲ್ಲಿ ಆರಂಭಿಸುತ್ತಾನೆ.

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ

ಸುಖ ಮತ್ತು ದುಃಖ, ಲಾಭ ಮತ್ತು ಹಾನಿ, ಜಯ ಮತ್ತು ಪರಾಜಯ, ಇವುಗಳನ್ನು ಸಮಾನವೆಂದೆಣಿಸಿ ಯುದ್ಧಕ್ಕಾಗಿ ಸಿದ್ಧನಾಗು. ಹೀಗೆ ಮಾಡುವದರಿಂದ ನಿನಗೆ ಪಾಪವು ತಗಲುವದಿಲ್ಲ. ೩೮

ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ

ನಾನು ನಿನಗೆ ಸಾಂಖ್ಯ ಸಿದ್ಧಾಂತ(ತರ್ಕವಾದ)ಕ್ಕನುಸಾರವಾಗಿ ನಿನ್ನ ಈ ಕರ್ತವ್ಯವನ್ನು ತೋರಿಸಿಕೊಟ್ಟೆನು.

ಈಗ ಯೋಗವಾದಕ್ಕನುಸಾರವಾಗಿ ತಿಳಿಯಹೇಳುವದನ್ನು ಕೇಳು. ಇದರ ಆಶ್ರಯವನ್ನು ಹಿಡಿಯುವದರಿಂದ ನೀನು ಕರ್ಮಬಂಧನವನ್ನು ಮುರಿಯಲು ಶಕ್ತನಾಗುವೆ. ೩೯

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೆ
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್

ಇದರಲ್ಲಿ ಆರಂಭದ ನಾಶವಾಗುವದಿಲ್ಲ. ವಿರೋಧ ಪರಿಣಾಮವುಂಟಾಗುವದಿಲ್ಲ. ಈ ಧರ್ಮದ ಯತ್ಕಿಂಚಿತ್ ಪಾಲನೆಯು ಕೂಡ ಮಹಾಭಯದಿಂದ ಪಾರುಮಾಡುತ್ತದೆ. ೪೦

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ

ಎಲೈ ಕುರುನಂದನನೆ, ಯೋಗವಾದಿಯ ನಿಶ್ಚಯಾತ್ಮಕ ಬುದ್ಧಿಯು ಒಂದೇ ರೂಪವುಳ್ಳದಾಗಿರುತ್ತದೆ. ಆದರೆ ನಿಶ್ಚಯವಿಲ್ಲದವರ ಬುದ್ಧಿಗಳು ಅನೇಕ ಶಾಖೆಗಳುಳ್ಳವಾಗಿಯೂ ಅನಂತವಾಗಿಯೂ ಇರುತ್ತವೆ. ೪೧

ಟಿಪ್ಪಣಿ—ಒಂದು ಬುದ್ಧಿಯು ಮಾಯವಾಗಿ ಅನೇಕವಾದಾಗ ಆ ಬುದ್ಧಿಯು ಇರದೆ [ ವಿಷಯ- ] ವಾಸನಾರೂಪವನ್ನು ಧರಿಸುತ್ತದೆ. ಆದುದರಿಂದ ಬುದ್ಧಿಗಳೆಂದರೆ [ ವಿಷಯ- ] ವಾಸನೆಯೆಂದರ್ಥ.

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯ ವಿಪಶ್ಚಿತಃ
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ

ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ

ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ

ಅಜ್ಞಾನಿಗಳಾದ ವೇದವಾದಿಗಳು, "ಇದರ ಹೊರತು ಬೇರೊಂದಿಲ್ಲ" ಎಂದು ಹೇಳುವವರು, ಆಸೆಯುಳ್ಳವರು, ಸ್ವರ್ಗವನ್ನು ಶ್ರೇಷ್ಠವೆಂದೆಣಿಸುವವರು, ಕರ್ಮಕ್ಕೆ ಜನ್ಮಮರಣರೂಪಿಯಾದ ಫಲವನ್ನು ಕೊಡುವ, ಮತ್ತು ಭೋಗೈಶ್ವರ್ಯ ಪ್ರಾಪ್ತಿಗಾಗಿ ಮಾಡಬೇಕಾಗಿರುವ, ಕರ್ಮಗಳ ವರ್ಣನೆಯಿಂದ ತುಂಬಿದ ಮಾತುಗಳಿಗೆ ಬಣ್ಣಗಟ್ಟಿ ಆಡುತ್ತಾರೆ. ಭೋಗೈಶ್ವರ್ಯಗಳಲ್ಲಿ ಆಸಕ್ತರಾಗಿರುವ ಈ ಜನರ ಬುದ್ಧಿಯ ನಡು ಮುರಿಯುತ್ತದೆ. ಇವರ

ಬುದ್ಧಿಯಲ್ಲಿ ನಿಶ್ಚಯಶಕ್ತಿಯಿರುವದೂ ಇಲ್ಲ, ಸಮಾಧಿಯಲ್ಲಿ ಸ್ಥಿರವಾಗಿರುವ ಶಕ್ತಿಯಿರುವದೂ ಇಲ್ಲ. ೪೨-೪೪

ಟಿಪ್ಪಣಿ—ಯೋಗವಾದಕ್ಕೆ ವಿರುದ್ಧವಾಗಿ ಕರ್ಮಕಾಂಡ ಅಥವಾ ವೇದವಾದವನ್ನು ಮೇಲಿನ ಮೂರು ಶ್ಲೋಕಗಳು ವರ್ಣಿಸುತ್ತವೆ. ಕರ್ಮಕಾಂಡ ಅಥವಾ ವೇದವಾದವೆಂದರೆ ಫಲವನ್ನು ಹುಟ್ಟಿಸಲೋಸುಗ ಉದ್ಯೋಗಮಾಡುವ ಅಗಣಿತ ಕ್ರಿಯೆಗಳು. ಈ ಕ್ರಿಯೆಗಳು ವೇದದ ರಹಸ್ಯವಾದ ವೇದಾಂತದಿಂದ ಭಿನ್ನವಾದವು ಮತ್ತು ಅಲ್ಪ ಫಲವನ್ನು ಕೊಡುವವಾದುರಿಂದ ನಿರರ್ಥಕಗಳಾಗಿವೆ.

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್

ಎಲೈ ಅರ್ಜುನನೆ, ನೀನು ವೇದದ ವಿಷಯಗಳಾದ ಮೂರು ಗುಣಗಳು ನಿನಗೆ ಅಂಟದಂತಿರು. ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾಗು. ನಿತ್ಯ ಸತ್ಯವಸ್ತುವಿನಲ್ಲಿ ಇರು ಯಾವೊಂದು ವಸ್ತುವನ್ನೂ ಪಡೆಯುವ ಮತ್ತು ರಕ್ಷಿಸುವ ತೊಡಕಿಗೆ ಸಿಕ್ಕಬೇಡ. ಆತ್ಮಪರಾಯಣನಾಗು. ೪೫

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ

ಭಾವಿಯಿಂದಾಗುವ ಕೆಲಸಗಳೆಲ್ಲಾ ಅದೇ ಪ್ರಕಾರ ಸರೋವರದಿಂದಲೂ ಆಗುವಂತೆಯೇ ವೇದಗಳಲ್ಲಿರುವದೆಲ್ಲಾ ಜ್ಞಾನಿಯೂ ಬ್ರಹ್ಮಪರಾಯಣನೂ ಆದವನಿಗೆ ಆತ್ಮಾನುಭಾವದಿಂದ ದೊರಕುತ್ತಿರುತ್ತದೆ ೪೬

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಸ್ತ್ವಕರ್ಮಣಿ

ನಿನಗಿರುವ ಅಧಿಕಾರವು ಕರ್ಮದಲ್ಲಿ ಮಾತ್ರವಲ್ಲದೆ ಅದರಿಂದ ಉತ್ಪನ್ನವಾಗುವ ಅನೇಕ ಫಲಗಳಲ್ಲಿ ಎಂದಿಗೂ ಇಲ್ಲ. ಕರ್ಮದ ಫಲವು ನಿನಗೆ ನಿನ್ನ ಕರ್ಮಕ್ಕೆ ಎಂದಿಗೂ ಮೂಲಕಾರಣವಾಗದಿರಲಿ. ಕರ್ಮ ಮಾಡದಿರಲು ಕೂಡ ನೀನು ಆಸಿಸಬೇಡ. ೪೭

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ

ಹೇ ಧನಂಜಯ, ಆಸಕ್ತಿಯನ್ನು ತ್ಯಜಿಸಿ, ಯೋಗಸ್ಥನಾಗಿ, ಎಂದರೆ ಸಫಲತೆ-ನಿಷ್ಫಲತೆಗಳಲ್ಲಿ ಸಮಾನ ಭಾವವನ್ನಿಟ್ಟು, ನೀನು ಕರ್ಮಮಾಡು. ಸಮತೆಯ ಹೆಸರೇ ಯೋಗ. ೪೮

ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ

ಹೇ ಧನಂಜಯ, ಸಮತಾಬುದ್ಧಿಯ ತೂಕದಲ್ಲಿ ಕೇವಲ ಕರ್ಮವು ಬಹು ತುಚ್ಛವಾದುದು. ನೀನು ಸಮತಾಬುದ್ಧಿಯನ್ನು ಆಶ್ರಯಿಸು. ಫಲವನ್ನು ಉದ್ದೇಶವನ್ನಾಗಿ ಮಾಡಿಕೊಳ್ಳುವ ಮನುಷ್ಯನು ಕರುಣಾಪಾತ್ರನು. ೪೯

ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ

ಬುದ್ಧಿಯುಕ್ತನಾದ, ಎಂದರೆ ಸಮತಾಬುದ್ಧಿಯುಳ್ಳ, ಮನುಷ್ಯನಿಗೆ ಇಲ್ಲಿ ಪಾಪಪುಣ್ಯಗಳ ಸ್ಪರ್ಶವಾಗುವದಿಲ್ಲ. ಆದುದರಿಂದ ನೀನು ಸಮತೆಗಾಗಿ ಪ್ರಯತ್ನಿಸು. ಸಮತೆಯೇ ಕಾರ್ಯಕುಶಲತೆ. ೫೦

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ

ಏಕೆಂದರೆ ಸಮತಾಬುದ್ಧಿಯುಳ್ಳ ಜನರು ಕರ್ಮದಿಂದ ಹುಟ್ಟುವ ಫಲವನ್ನು ತ್ಯಜಿಸಿ ಜನ್ಮಬಂಧನದಿಂದ ಮುಕ್ತರಾಗಿಬಿಡುತ್ತಾರೆ ಮತ್ತು ನಿಷ್ಕಳಂಕ ಗತಿಯನ್ನು---ಮೋಕ್ಷಪದವನ್ನು—ಪಡೆಯುತ್ತಾರೆ. ೫೧

ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ

ನಿನ್ನ ಬುದ್ಧಿಯು ಮೋಹವೆಂಬ ಜೌಗನ್ನು ದಾಟಿದ ಮೇಲೆ ನಿನಗೆ ಕೇಳಿದ ವಿಷಯದಲ್ಲಿಯೂ ಕೇಳಲುಳಿದಿರುವ ವಿಷಯದಲ್ಲಿಯೂ ಔದಾಸೀನ್ಯವು ಉದಿಸುತ್ತದೆ. ೫೨

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ
ಸಮಾಧಾವಚಲಾ ಬುದ್ಧಿಸ್ತದಾಯೋಗಮವಾಪ್ಸ್ಯಸಿ

ಅನೇಕ ಪ್ರಕಾರದ ಸಿದ್ಧಾಂತಗಳನ್ನು ಕೇಳುವದರಿಂದ ವ್ಯಗ್ರವಾದ ನಿನ್ನ ಬುದ್ಧಿಯು ಯಾವಾಗ ಸಮಾಧಿಯಲ್ಲಿ ಸ್ಥಿರಗೊಳ್ಳುವದೋ ಆಗಲೇ ನೀನು ಸಮತಾಬುದ್ಧಿಯನ್ನು ಪಡೆಯುವೆ. ೫೩

ಅರ್ಜುನನೆಂದನು—

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ

ಎಲೈ ಕೇಶವನೆ, ಸ್ಥಿತಪ್ರಜ್ಞನ—ಎಂದರೆ ಸಮಾಧಿಯಲ್ಲಿರುವವನ—ಚಿಹ್ನೆಗಳೇನು? ಸ್ಥಿತಪ್ರಜ್ಞನು ಯಾವ ರೀತಿಯಲ್ಲಿ ಮಾತನಾಡುತ್ತಾನೆ, ಕೂಡುತ್ತಾನೆ, ಚಲಿಸುತ್ತಾನೆ? ೫೪

ಶ್ರೀ ಭಗವಂತನು ಹೇಳಿದನು—

ಪ್ರಜಹಾತಿ ಯದಾ ಕಾಮಾನ್ಸರ್ವಾನ್ಪಾರ್ಥ ಮನೋಗತಾನ್
ಆತ್ಮನೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ

ಹೇ ಪಾರ್ಥ, ಯಾವಾಗ ಮನುಷ್ಯನು ಮನಸ್ಸಿನಲ್ಲೇಳುತ್ತಿರುವ ಆಸೆಗಳೆಲ್ಲವನ್ನೂ ಬಿಟ್ಟು ಆತ್ಮದ ಮೂಲಕವೇ ಆತ್ಮದಲ್ಲಿ ಸಂತುಷ್ಟನಾಗಿರುವ ಸ್ಥಿತಿಯನ್ನೈದುವನೊ ಆಗ ಅವನನ್ನು ಸ್ಥಿತಪ್ರಜ್ಞನೆಂದು ಕರೆಯುತ್ತಾರೆ. ೫೫

ಟಿಪ್ಪಣಿ—ಆತ್ಮದಿಂದಲೇ ಆತ್ಮದಲ್ಲಿ ಸಂತುಷ್ಟನಾಗಿರುವದೆಂದರೆ ಆತ್ಮದ ಆನಂದವನ್ನು ಒಳಗಿನಿಂದ ಅರಸುವದು; ಸುಖದುಃಖವನ್ನೀಯುವ ಹೊರಗಿನ ವಸ್ತುಗಳಲ್ಲಿ ಆನಂದದ ಆಧಾರವನ್ನಿಟ್ಟುಕೊಳ್ಳದಿರುವದು. ಆನಂದವು ಸುಖದಿಂದ ಭಿನ್ನವಾದ ವಸ್ತುವೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ನನಗೆ

ಷಣವು ದೊರೆತ ಮೇಲೆ ಅದರಲ್ಲಿ ಸುಖವನ್ನು ಕಾಣುವೆನೆಂಬುದು ಮೋಹ. ನಾನು ತಿರುಕನಾದರೆ ಉಣಲು ದುಃಖವೊದಗುವುದು; ಆದರೂ ನಾನು ಕಳ್ಳತನದಲ್ಲಾಗಲಿ ಅಥವಾ ಇನ್ನಾವ ಪ್ರಲೋಭನೆಗಳಲ್ಲಾಗಲಿ ಬೀಳುವದಿಲ್ಲ; ಎಂದು ಹೇಳುವದರಲ್ಲಡಕವಾಗಿರುವ ವಿಷಯವು ನನಗೆ ಆನಂದವನ್ನುಂಟುಮಾಡುತ್ತದೆ. ಅದು ಆತ್ಮಸಂತೋಷ.

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ

ಯಾವನು ದುಃಖದಿಂದ ದುಃಖಿತನಾಗುವದಿಲ್ಲವೊ, ಸುಖದ ಇಚ್ಛೆಯನ್ನಿಟ್ಟುಕೊಳ್ಳುವದಿಲ್ಲವೊ, ಯಾವನು ರಾಗ, ಭಯ, ಕ್ರೋಧ, ಇವುಗಳಿಲ್ಲದಿರುವನೊ ಅವನು ಸ್ಥಿರಬುದ್ಧಿಯುಳ್ಳ ಮುನಿಯೆಂದು ಕರೆಸಿಕೊಳ್ಳುತ್ತಾನೆ. ೫೬

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ

ಯಾವನು ಎಲ್ಲ ಕಡೆಯೂ ರಾಗರಹಿತನಾಗಿ ಶುಭ ಅಥವಾ ಅಶುಭದಪ್ರಾಪ್ತಿಗಾಗಿ ಹರ್ಷಿತನೂ ಆಗದೆ ದುಃಖವನ್ನೂ ಪಡದೆ ಇರುತ್ತಾನೊ ಅವನ ಬುದ್ಧಿಯು ಸ್ಥಿರವಾದುದು. ೫೭

ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ

ಆಮೆಯು ಎಲ್ಲ ಕಡೆಯಿಂದ ತನ್ನ ಅಂಗಗಳನ್ನು ಒಳಕ್ಕೆಳೆದುಕೊಳ್ಳುವಂತೆಯೇ ಈ ಮನುಷ್ಯನು ಇಂದ್ರಿಯಗಳನ್ನು ಅವುಗಳ ವಿಷಯವಸ್ತುಗಳಿಂದ ಎಳೆದುಕೊಂಡಮೇಲೆ ಅವನ ಬುದ್ಧಿಯು ಸ್ಥಿರಪಟ್ಟಿತೆಂದೆನಿಸಿಕೊಳ್ಳುತ್ತದೆ. ೫೮

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ

ದೇಹಧಾರಿಯು ನಿರಾಹಾರಿಯಾಗಿದ್ದಾಗ ಅವನ ವಿಷಯೇಂದ್ರಿಯಗಳು ಮಂದಗತಿಯುಳ್ಳವಾಗುತ್ತವೆ. ಆದರೆ ರಸವು [ರುಚಿಯು]

ಹೋಗುವದಿಲ್ಲ. ಆ ರಸವಾದರೋ ಈಶ್ವರನ ಸಾಕ್ಷಾತ್ಕಾರವಾಗುವದರಿಂದ ಶಾಂತವಾಗುತ್ತದೆ. ೫೯

ಟಿಪ್ಪಣಿ—ಈ ಶ್ಲೋಕವು ಉಪವಾಸಾದಿಗಳನ್ನು ನಿಷೇಧಿಸುವದಿಲ್ಲ. ಹಾಗೆ ನೋಡಿದರೆ ಇದು ಅವುಗಳ ಮಿತಿಯನ್ನು ಸೂಚಿಸುತ್ತದೆ. ವಿಷಯೇಂದ್ರಿಯಗಳನ್ನು ಶಾಂತಗೊಳಿಸಲು ಉಪವಾಸಾದಿಗಳು ಆವಶ್ಯಕ. ಪರಂತು ಅವುಗಳ [ವಿಷಯಗಳ] ಬೇರು, ಎಂದರೆ ಅವುಗಳಲ್ಲಿರತಕ್ಕಂಥ ರಸವು [ರುಚಿಯು] ಈಶ್ವರನು ಗೋಚರವಾದ ಮೇಲೆಯೇ ಶಾಂತವಾಗುವುದು. ಯಾರಿಗೆ ಈಶ್ವರ ಸಾಕ್ಷಾತ್ಕಾರದ ರಸವು ಏರುತ್ತದೆಯೊ ಅವನಿಗೆ ಉಳಿದ ರಸಗಳು ಮರೆತೇ ಹೋಗುತ್ತವೆ.

ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ

ಹೇ ಕೌಂತೇಯ, ಚತುರನಾದ ಪುರುಷನು ಉದ್ಯೋಗಗೈಯುತ್ತಿರುತ್ತಿದ್ದರೂ ಇಂದ್ರಿಯಗಳ ಚಂಚಲತೆಯೆಷ್ಟೆಂದರೆ ಅವು ಅವನ ಮನಸ್ಸನ್ನು ಕೂಡ ಬಲಾತ್ಕಾರದಿಂದ ಒಯ್ಯುತ್ತವೆ. ೬೦

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ

ಈ ಇಂದ್ರಿಯಗಳೆಲ್ಲವನ್ನೂ ವಶದಲ್ಲಿಟ್ಟುಕೊಂಡು ಯೋಗಿಯು ನನ್ನಲ್ಲಿ ತನ್ಮಯನಾಗಿರಬೇಕು. ಏಕೆಂದರೆ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವವನ ಬುದ್ಧಿಯು ಸ್ಥಿರವಾಗಿರುತ್ತದೆ. ೬೧

ಟಿಪ್ಪಣಿ—ತಾತ್ಪರ್ಯ, ಭಕ್ತಿಯಿಲ್ಲದೆ—ಈಶ್ವರನ ಬೆಂಬಲವಿಲ್ಲದೆ—ಮನುಷ್ಯನ ಪ್ರಯತ್ನವು ಮಿಥ್ಯವಾದುದು.

ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಭಿಜಾಯತೇ

ವಿಷಯಗಳನ್ನು ಕುರಿತು ಚಿಂತನೆಮಾಡುವ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿಯುದಿಸುತ್ತದೆ; ಆಸಕ್ತಿಯಿಂದ ಆಸೆಯುಂಟಾಗುತ್ತದೆ; ಆಸೆಯಿಂದ ಕ್ರೋಧವು ಹುಟ್ಟುತ್ತದೆ. ೬೨

ಟಿಪ್ಪಣಿ— ಆಸೆಪಡುವವನು ಕ್ರೋಧವನ್ನು ತಪ್ಪಿಸಿಕೊಳ್ಳಲಾರನು. ಏಕೆಂದರೆ ಆಸೆಯು ಎಂದಿಗೂ ತೃಪ್ತಿಗೊಳ್ಳುವದೇ ಇಲ್ಲ.

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ

ಕ್ರೋಧದಿಂದ ಮೌಢ್ಯವು ಉತ್ಪನ್ನವಾಗುತ್ತದೆ. ಮೌಢ್ಯದಿಂದ ಎಚ್ಚರ ತಪ್ಪುತ್ತದೆ ಎಚ್ಚರ ತಪ್ಪುವದರಿಂದ ಜ್ಞಾನವು ನಾಶವಾಗುತ್ತದೆ. ಯಾರ ಜ್ಞಾನವು ನಾಶವಾಗಿದೆಯೊ ಅವನು ಶವದಂತೆಯೇ ಸರಿ. ೬೩

ರಾಗದ್ವೇಷಮುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ

ಆದರೆ ಯಾರ ಮನಸ್ಸು ತನ್ನ ಅಧಿಕಾರದಲ್ಲಿದೆಯೊ ಮತ್ತು ಯಾರ ಇಂದ್ರಿಯಗಳು ರಾಗದ್ವೇಷರಹಿತಗಳಾಗಿ ತನ್ನ ವಶದಲ್ಲಿರುತ್ತವೆಯೊ ಆ ಮನುಷ್ಯನು ಇಂದ್ರಿಯಗಳ ವ್ಯಾಪಾರವನ್ನು ನಡೆಸುತ್ತಿದ್ದರೂ ಮನಸ್ಸಿನ ಪ್ರಸನ್ನತೆಯನ್ನು ಪಡೆಯುತ್ತಾನೆ. ೬೪

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃಪರ್ಯವತಿಷ್ಠತೇ

ಚಿತ್ತವು ಪ್ರಸನ್ನವಾಗಿರುವದರಿಂದ ಅವನ ದುಃಖಗಳೆಲ್ಲವೂ ದೂರವಾಗುತ್ತವೆ. ಯಾರಿಗೆ ಪ್ರಸನ್ನತೆಯು ಪ್ರಾಪ್ತವಾಗುತ್ತದೆಯೊ ಅವನ ಬುದ್ಧಿಯು ಒಡನೆಯೇ ಸ್ಥಿರವಾಗಿಬಿಡುತ್ತದೆ. ೬೫

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ

ಸಮತಾಬುದ್ಧಿಯಿಲ್ಲದವನಿಗೆ ವಿವೇಕವಿಲ್ಲ, ಭಕ್ತಿಯಿಲ್ಲ. ಭಕ್ತಿಯಿಲ್ಲದವನಿಗೆ ಶಾಂತಿಯು ದೊರೆಯುವದಿಲ್ಲ. ಶಾಂತಿಯಿಲ್ಲದೆಡೆ ಸುಖವೆಲ್ಲಿಂದ ಬಂದೀತು? ೬೬

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋನುವಿಧೀಯತೇ
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ

ವಿಷಯ [ವಿಷಯವಸ್ತು]ಗಳಲ್ಲಿ ಹಾರಾಡುತ್ತಿರುವ ಇಂದ್ರಿಯ ಗಳ ಹಿಂದೆ ಯಾರ ಮನಸ್ಸು ಓಡುತ್ತದೆಯೊ ಅವನ ಮನಸ್ಸು ಗಾಳಿಯು ಹಡಗನ್ನು ನೀರಿನಲ್ಲಿ ಎಳೆದುಕೊಂಡು ಹೋಗುವಂತೆ ಅವನ ಬುದ್ಧಿಯನ್ನು ಎಲ್ಲಿ ಬೇಕೆಂದರಲ್ಲಿ ಎಳೆದುಕೊಂಡು ಹೋಗು ತ್ತದೆ. ೬೭

ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ

ಆದುದರಿಂದ, ಮಹಾಬಾಹುವೆ, ಯಾರ ಇಂದ್ರಿಯಗಳು ನಾಲ್ಕೂ ದಿಕ್ಕಿನ ವಿಷಯ [ವಿಷಯವಸ್ತು]ಗಳಿಂದ ತಪ್ಪಿಸಿಕೊಂಡು ತನ್ನ ವಶಕ್ಕೆ ಬಂದುಬಿಡುತ್ತವೆಯೊ ಅವನ ಬುದ್ಧಿಯು ಸ್ಥಿರವಾಗು ತ್ತದೆ. ೬೮

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ

ಸಕಲ ಪ್ರಾಣಿಗಳೂ ನಿದ್ದೆಗೈಯುತ್ತಿರುವಾಗ ಸಂಯಮಿಯು ಎಚ್ಚೆತ್ತಿರುತ್ತಾನೆ. ಜನಗಳು ಎಚ್ಚೆತ್ತಿರುವಾಗ ಜ್ಞಾನಿಯಾದ ಮುನಿಯು ನಿದ್ದೆಗೈಯುತ್ತಿರುತ್ತಾನೆ. ೬೯

ಟಿಪ್ಪಣಿ—ಭೋಗಿಗಳಾದ ಮನುಷ್ಯರು ರಾತ್ರಿ ಹನ್ನೆರಡು-ಒಂದು ತಾಸಿನ ತನಕ ನಾಟ್ಯ, ತಮಾಷೆ, ಖಾನ-ಪಾನ, ಇವೇ ಮುಂತಾದವುಗಳಲ್ಲಿ ತಮ್ಮ ಕಾಲ ವನ್ನು ಕಳೆದು ಪುನಃ ಬೆಳಿಗ್ಗೆ ಏಳೆಂಟು ಘಂಟೆಯವರೆಗೆ ನಿದ್ದೆಮಾಡುತ್ತಾರೆ. ಸಂ ಯಮಿಗಳು ರಾತ್ರಿ ಏಳೆಂಟು ಘಂಟೆಗೆ ಮಲಗಿಕೊಂಡು ಮಧ್ಯ ರಾತ್ರಿಯಲ್ಲೆದ್ದು ಈಶ್ವರನನ್ನು ಧ್ಯಾನಿಸುತ್ತಾರೆ. ಇದಲ್ಲದೆ ಭೋಗಿಯು ಸಂಸಾರ ಪ್ರಪಂಚವನ್ನು ಹೆಚ್ಚಿಸಿಕೊಂಡು ಈಶ್ವರನನ್ನು ಮರೆಯುವಲ್ಲಿ ಸಂಯಮಿಯು ಸಾಂಸಾರಿಕ ಪ್ರಪಂ ಚದ ಅರಿವೇ ಇಲ್ಲದೆ ಇರುತ್ತಾನೆ ಮತ್ತು ಈಶ್ವರಸಾಕ್ಷಾತ್ಕಾರದಲ್ಲಿ ತೊಡಗಿರು ತ್ತಾನೆ. ಈ ರೀತಿಯಾಗಿ ಇಬ್ಬರ ದಾರಿಯೂ ಬೇರೆಯೆಂಬುದನ್ನು ಭಗವಂತನು ಈ ಶ್ಲೋಕದಲ್ಲಿ ತೋರಿಸಿದ್ದಾನೆ.

ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮ
ಕಾಮಿ

ನದಿಗಳ ಪ್ರವೇಶದಿಂದ ತುಂಬುತ್ತಿದ್ದರೂ ಸಮುದ್ರವು ಅಚಲವಾಗಿರುವಂತೆಯೇ ಯಾವ ಮನುಷ್ಯನಲ್ಲಿ ಪ್ರಾಪಂಚಿಕ ಭೋಗಗಳು ಶಾಂತವಾಗುತ್ತವೆಯೊ ಅವನು ಮಾತ್ರ ಶಾಂತಿಯನ್ನು ಪಡೆಯುತ್ತಾನೆ; ಆಸೆಗೀಡಾಗಿರುವವನಲ್ಲ. ೭೦

ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಃಸ್ಪೃಹಃ
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ

ಎಲ್ಲಾ ಆಸೆಗಳನ್ನೂ ತ್ಯಜಿಸಿ ಇಚ್ಛೆ-ಮಮತೆ-ಅಹಂಕಾರಗಳಿಲ್ಲದವನಾಗಿ ನಡೆಯುವವನು ಮಾತ್ರ ಶಾಂತಿಯನ್ನು ಹೊಂದುತ್ತಾನೆ. ೭೧

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ

ಹೇ ಪಾರ್ಥ, ಈಶ್ವರನನ್ನು ಗುರುತಿಸುವ ಸ್ಥಿತಿಯು ಈ ರೀತಿಯದಾಗಿರುತ್ತದೆ. ಇದನ್ನು ಪಡೆದವನು ಪುನಃ ಮೋಹವಶನಾಗುವದಿಲ್ಲ. ಮೃತ್ಯುಕಾಲದಲ್ಲಿಯೂ ಇಂತಹ ಸ್ಥಿತಿಯೇ ನಿಂತಿದ್ದರೆ ಅವನು ಬ್ರಹ್ಮನಿರ್ವಾಣವನ್ನೈದುತ್ತಾನೆ. ೭೨

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯವು ಸಮಾಪ್ತವಾದುದು.



೩

# ಕರ್ಮಯೋಗ



ಈ ಅಧ್ಯಾಯವು ಗೀತೆಯ ಸ್ವರೂಪವನ್ನರಿಯಲು ಬೀಗದಕ್ಕೈಯಂತಿದೆಯೆನ್ನಬಹುದು. ಇದರಲ್ಲಿ ಕರ್ಮವನ್ನು ಹೇಗೆ ಮಾಡಬೇಕು, ಯಾವ ಕರ್ಮವನ್ನು ಮಾಡಬೇಕು ಮತ್ತು ಯಾವದನ್ನು ನಿಜವಾದ ಕರ್ಮವೆಂದು ಕರೆಯಬೇಕು, ಇದು ಸ್ಪಷ್ಟಗೊಳಿಸಲ್ಪಟ್ಟಿದೆ. ಮತ್ತು ನಿಜವಾದ ಜ್ಞಾನವು ಪಾರಮಾರ್ಥಿಕ ಕರ್ಮಗಳಲ್ಲಿ ಪರಿಣಾಮ ಹೊಂದಲೇಬೇಕೆಂಬುದು ತೋರಿಸಲ್ಪಟ್ಟಿದೆ.

ಅರ್ಜುನ ಉವಾಚ—

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ

ಅರ್ಜುನನೆಂದನು—

ಜನಾರ್ದನನೆ, ನೀನು ಕರ್ಮಕ್ಕಿಂತ ಬುದ್ಧಿಯು ಶ್ರೇಷ್ಠವೆಂದೆಣಿಸುವದಾದರೆ, ಹೇ ಕೇಶವ, ನೀನು ನನ್ನನ್ನು ಘೋರ ಕರ್ಮವೆಸಗಲೇಕೆ ಪ್ರೇರಿಸುವೆ? ೧

ಟಿಪ್ಪಣಿ—ಬುದ್ಧಿಯೆಂದರೆ ಸಮತಾಬುದ್ಧಿ.

ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ

ನಿನ್ನ ಮಿಶ್ರ ವಚನಗಳಿಂದ ನೀನು ನನ್ನ ಬುದ್ಧಿಯನ್ನು ಶಂಕಾಶೀಲವಾಗಿಯೋ ಎಂಬಂತೆ ಮಾಡಿಬಿಟ್ಟದ್ದೀಯೆ. ಆದುದರಿಂದ ನನಗೆ ಒಂದೇ ಒಂದು ವಿಷಯವನ್ನು ನಿಶ್ಚಯಪೂರ್ವಕವಾಗಿ ಹೇಳು—ನನಗೆ ಏತರಿಂದ ಕಲ್ಯಾಣವಾಗುವುದು? ೨

ಟಿಪ್ಪಣಿ—ಅರ್ಜುನನು ಬೇಸರಗೊಳ್ಳುತ್ತಾನೆ ಏಕೆಂದರೆ ಒಂದು ಕಡೆ ಭಗವಂತನು ಅವನು ಶಿಥಿಲನಾದುದಕ್ಕಾಗಿ ಅವನನ್ನು ಮೂದಲಿಸುತ್ತಾನೆ. ಇನ್ನೊಂದು ಕಡೆ ಎರಡನೆಯ ಅಧ್ಯಾಯದ ೪೯-೫೦ನೆಯ ಶ್ಲೋಕಗಳಲ್ಲಿ ಕರ್ಮತ್ಯಾಗದ ಪ್ರಸ್ತಾವನೆಯು ದೊರಕುತ್ತದೆ. ಗಂಭೀರ ವಿಚಾರ ಮಾಡಿದರೆ ಹಾಗೇನೂ [ಒಂದಕ್ಕೊಂದು ವ್ಯತಿರಿಕ್ತವಾಗಿ] ಇಲ್ಲವೆಂದು ತಿಳಿಯಬರುವ ಅಂಶವನ್ನು ಭಗವಂತನು ಮುಂದೆ ತೋರಿಸುತ್ತಾನೆ.

ಶ್ರೀಭಗವಾನುವಾಚ—
ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ

ಶ್ರೀ ಭಗವಂತನು ಹೇಳಿದನು—

ಪಾಪವಿಲ್ಲದವನೆ, ಈ ಲೋಕದಲ್ಲಿ ನಾನು ಮೊದಲೆರಡು ಅವಸ್ಥೆಗಳನ್ನು ತೋರಿಸಿದ್ದೇನೆ. ಒಂದನೆಯದು ಜ್ಞಾನಯೋಗದ ಮೂಲಕ ಸಾಂಖ್ಯರಿಗೆ, ಎರಡನೆಯದು ಕರ್ಮಯೋಗದ ಮೂಲಕ ಯೋಗಿಗಳಿಗೆ. ೩

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ

ಕರ್ಮವನ್ನು ಆರಂಭಿಸದಿರುವದರಿಂದ ಮನುಷ್ಯನು ನೈಷ್ಕರ್ಮ್ಯವನ್ನನುಭವಿಸುವದಿಲ್ಲ ಮತ್ತು ಕರ್ಮದ ಕೇವಲ ಬಾಹ್ಯತ್ಯಾಗದಿಂದ ಮೋಕ್ಷವನ್ನು ಸಂಪಾದಿಸುವದಿಲ್ಲ. ೪

ಟಿಪ್ಪಣಿ—ನೈಷ್ಕರ್ಮ್ಯವೆಂದರೆ ಮನಸ್ಸು, ಮಾತು ಮತ್ತು ಶರೀರ, ಇವುಗಳಿಂದ ಕರ್ಮಗೈಯದಿರುವದು. ಇಂತಹ ನೈಷ್ಕರ್ಮ್ಯದ ಅನುಭವವು ಕರ್ಮಗೈಯದಿರುವದರಿಂದ ಯಾರಿಗೂ ಉಂಟಾಗಲಾರದು. ಹಾಗಾದರೆ ಇದರ ಅನುಭವವುಂಟಾಗುವದು ಹೇಗೆ ಎಂಬುದನ್ನು ಈಗ ನೋಡಬೇಕಾಗಿದೆ.

ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ

ವಾಸ್ತವ್ಯವಾಗಿ ಯಾರೂ ಒಂದು ಕ್ಷಣ ಕೂಡ ಕರ್ಮ ಮಾಡದೆ ಇರಲಾರನು. ಪ್ರಕೃತಿಯಿಂದ ಉತ್ಪನ್ನವಾದ ಗುಣಗಳು ಪರವಶನಾಗಿರುವ ಪ್ರತಿಯೊಬ್ಬ ಮನುಷ್ಯನಿಂದಲೂ ಕರ್ಮವನ್ನು ಮಾಡಿಸುತ್ತವೆ. ೫

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್
ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ

ಯಾವ ಮನುಷ್ಯನು ಕರ್ಮ ಮಾಡುವ ಇಂದ್ರಿಯಗಳನ್ನು ತಡೆದರೂ ಆ ಇಂದ್ರಿಯಗಳ ವಿಷಯ [ವಿಷಯವಸ್ತು] ಗಳ ಚಿಂತನೆಯನ್ನು ಮನಸ್ಸಿನಲ್ಲಿ ಮಾಡುತ್ತಾನೊ ಅವನು ಮೂಢಾತ್ಮನೆಂದೂ ಮಿಥ್ಯಾಚಾರಿಯೆಂದೂ ಕರೆಸಿಕೊಳ್ಳುತ್ತಾನೆ. ೬

ಟಿಪ್ಪಣಿ—ಹೇಗೆಂದರೆ, ಮಾತನ್ನು ತಡೆದರೂ ಮನಸ್ಸಿನಲ್ಲಿ ಯಾರೋ ಒಬ್ಬರನ್ನು ಬೈಯುತ್ತಿರುವವನು ನಿಷ್ಕರ್ಮಿಯಲ್ಲ; ಅವನು ಮಿಥ್ಯಾಚಾರಿ. ಮನಸ್ಸನ್ನು ಅಂಕೆಯಲ್ಲಿಡುವದಕ್ಕಾಗುವವರೆಗೂ ಶರೀರವನ್ನು ಅಂಕೆಯಲ್ಲಿಡುವದು ನಿರರ್ಥಕವೆಂದು ಇದರ ತಾತ್ಪರ್ಯವಲ್ಲ. ಶರೀರವನ್ನು ನಿಗ್ರಹಿಸಿದ ವಿನಾ ಮನಸ್ಸಿನ ಮೇಲೆ ಅಂಕೆಯು ನೆಲೆಸುವದೇ ಇಲ್ಲ. ಪರಂತು ಶರೀರವನ್ನು ಅಂಕೆಯಲ್ಲಿಟ್ಟುಕೊಳ್ಳುವದರ ಜೊತೆಗೇ ಮನಸ್ಸಿನ ಮೇಲೆ ಅಂಕೆಯಿಡುವ ಪ್ರಯತ್ನವನ್ನೂ ಮಾಡಲೇಬೇಕು. ಭಯದಿಂದ ಅಥವಾ ಇದೇ ರೀತಿಯ ಬಾಹ್ಯಕಾರಣಗಳಿಂದ ಶರೀರವನ್ನು ತಡೆಯಲ್ಲಿಟ್ಟರೂ ಮನಸ್ಸಿನ ಮೇಲೆ ಅಂಕೆಯಿಡದೆ, ಮತ್ತು ಇಷ್ಟೇ ಅಲ್ಲದೆ, ಮನಸ್ಸಿನಲ್ಲಿ ವಿಷಯಭೋಗವನ್ನು ಮಾಡುತ್ತಿದ್ದು ಅವಕಾಶ ದೊರೆತರೆ ಶರೀರದಿಂದಲೂ ಭೋಗಿಸೋಣ, ಎಂದಿರುವಂತಹ ಮಿಥ್ಯಾಚಾರಿಗಳು ಇಲ್ಲಿ ನಿಂದೆಗೆ ಗುರಿಯಾಗಿದ್ದಾರೆ. ಇದರ ಮುಂದಿನ ಶ್ಲೋಕದಲ್ಲಿ ಇದಕ್ಕೆ ಪ್ರತಿಕೃಮದ ಭಾವವನ್ನು ತೋರಿಸುತ್ತಾರೆ.

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ

ಪರಂತು, ಅರ್ಜುನನೆ, ಯಾವ ಮನುಷ್ಯನು ಇಂದ್ರಿಯಗಳನ್ನು ಮನಃಪೂರ್ವಕವಾಗಿ ನಿಯಮದಲ್ಲಿಟ್ಟು ಸಂಗರಹಿತನಾಗಿ ಕರ್ಮಗೈವ ಇಂದ್ರಿಯಗಳ ಮೂಲಕ ಕರ್ಮಯೋಗವನ್ನಾಚರಿಸುತ್ತಾನೊ ಅವನು ಶ್ರೇಷ್ಠಪುರುಷನು. ೭

ಟಿಪ್ಪಣಿ—ಇದರಲ್ಲಿ ಬಾಹ್ಯ-ಆಂತರ್ಯಗಳ ಸಂಯೋಗವು ಮಾಡಲ್ಪಟ್ಟಿದೆ. ಮನಸ್ಸನ್ನು ಅಂಕೆಯಲ್ಲಿಟ್ಟಿದ್ದು ಕೂಡ ಮನುಷ್ಯನು ಶರೀರದ್ವಾರಾ, ಎಂದರೆ ಕರ್ಮೇಂದ್ರಿಯಗಳ ಮೂಲಕ, ಏನಾದರೊಂದು ಕೆಲಸವನ್ನು ಮಾಡಿಯೇ ಮಾಡುವನು. ಆದರೆ ಮನಸ್ಸನ್ನು ನಿಗ್ರಹಿಸಿರುವವನ ಕಿವಿಗಳು ದೂಷಣೆಯ ಮಾತುಗಳನ್ನು ಕೇಳದೆ ಈಶ್ವರ ಭಜನೆಯನ್ನು ಕೇಳುತ್ತವೆ; ಸತ್ಪುರುಷರ ಗುಣಗಾನವನ್ನು ಆಲಿಸುತ್ತವೆ. ಮನಸ್ಸನ್ನು ಅಂಕೆಯಲ್ಲಿಟ್ಟುಕೊಂಡಿರುವವನು ನಾವು ಯಾವುದನ್ನು ವಿಷಯವೆಂದು ಕರೆಯುತ್ತೇವೊ ಅದರಲ್ಲಿ ಅಭಿರುಚಿಯನ್ನೇ ಇಟ್ಟುಕೊಂಡಿರುವದಿಲ್ಲ. ಇಂತಹ ಮನುಷ್ಯನು ಆತ್ಮಕ್ಕೆ ಶೋಭಿಸುವ ಕೆಲಸಗಳನ್ನೇ ಮಾಡುವನು. ಇಂತಹ ಕರ್ಮಗಳನ್ನು ಮಾಡುವದನ್ನು ಕರ್ಮಮಾರ್ಗವೆಂದು ಕರೆಯುತ್ತಾರೆ ಯಾವದರ ಮೂಲಕ ಆತ್ಮವನ್ನು ಶರೀರದ ಬಂಧನದಿಂದ ಬಿಡಿಸುವ ಯೋಗವು ಸಾದಿಸಲ್ಪಡುತ್ತದೆಯೊ ಅದು ಕರ್ಮಯೋಗ. ಇದರಲ್ಲಿ ವಿಷಯಾಸಕ್ತಿಗೆ ಎಡೆಯಿರುವದು ಸಾಧ್ಯವೇ ಇಲ್ಲ.

ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋಹ್ಯಕರ್ಮಣಃ
ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ

ಆದುದರಿಂದ ನೀನು ನಿಯತ ಕರ್ಮವನ್ನು ಮಾಡು. ಕರ್ಮ ಮಾಡದಿರುವದಕ್ಕಿಂತ ಕರ್ಮಗೈವದು ಲೇಸು. ನಿನ್ನ ಶರೀರ ವ್ಯಾಪಾರವು ಕೂಡ ಕರ್ಮವಿಲ್ಲದೆ ನಡೆಯಲಾರದು. ೮

ಟಿಪ್ಪಣಿ—'ನಿಯತ' ವೆಂಬ ಶಬ್ದವು ಮೂಲಶ್ಲೋಕದಲ್ಲಿದೆ. ಅದರ ಸಂಬಂಧವು ಹಿಂದಿನ ಶ್ಲೋಕಕ್ಕೆ ಅನ್ವಯಿಸುತ್ತದೆ. ಅದರಲ್ಲಿ ಮನಸ್ಸಿನ ಮೂಲಕ ಇಂದ್ರಿಯಗಳನ್ನು ನಿಯಮದಲ್ಲಿಟ್ಟುಕೊಂಡಿದ್ದು ಸಂಗರಹಿತನಾಗಿ ಕರ್ಮಮಾಡುವವನ ಸ್ತುತಿಯಿದೆ. ಇಲ್ಲಿ ನಿಯತಕರ್ಮದ ಎಂದರೆ ಇಂದ್ರಿಯಗಳನ್ನು ನಿಯಮದಲ್ಲಿಟ್ಟು ಮಾಡುವ ಕರ್ಮದ ಅನುರೋಧವು ಮಾಡಲ್ಪಟ್ಟಿದೆ.

ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ

ಯಜ್ಞಾರ್ಥವಾಗಿ ಮಾಡಿದ ಕರ್ಮಗಳನ್ನು ಬಿಟ್ಟು ಉಳಿದ ಕರ್ಮಗಳಿಂದ ಈ ಲೋಕದಲ್ಲಿ ಬಂಧನವು ಹುಟ್ಟುತ್ತದೆ. ಆದುದರಿಂದ, ಕೌಂತೇಯನೆ, ನೀನು ರಾಗರಹಿತನಾಗಿ ಯಜ್ಞಾರ್ಥವಾಗಿ ಕರ್ಮ ಮಾಡು.

ಟಿಪ್ಪಣಿ— ಯಜ್ಞವೆಂದರೆ ಪರೋಪಕಾರಕ್ಕಾಗಿ, ಈಶ್ವರಾರ್ಥವಾಗಿ ಮಾಡಿದ ಕರ್ಮ

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್

ಯಜ್ಞದೊಡನೆ ಪ್ರಜೆಗಳನ್ನು ಸೃಷ್ಟಿ ಮಾಡಿ ಪ್ರಜಾಪತಿಯಾದ ಬ್ರಹ್ಮನು ಹೀಗೆಂದನು: "ಈ ಯಜ್ಞದ ಮೂಲಕ ನಿಮ್ಮ ವೃದ್ಧಿಯಾಗಲಿ. ಇದು ನಿಮಗೆ ಇಚ್ಛಿಸಿದ ಫಲವನ್ನು ಕೊಡಲಿ. ೧೦

ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ

"ಯಜ್ಞದ ಮೂಲಕ ನಿಮ್ಮಿಂದ ದೇವತೆಗಳ ಪೋಷಣೆಯೂ ದೇವತೆಗಳಿಂದ ನಿಮ್ಮ ಪೋಷಣೆಯೂ ಆಗಲಿ. ಮತ್ತು ಪರಸ್ಪರ ಪೋಷಣೆಗೈಯುತ್ತಾ ನೀವು ಪರಮ ಕಲ್ಯಾಣವನ್ನು ಪಡೆಯಿರಿ. ೧೧

ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ

"ಯಜ್ಞದ ಮೂಲಕ ಸಂತುಷ್ಟರಾದ ದೇವತೆಗಳು ನೀವು ಇಚ್ಛಿಸಿದ ಭೋಗಗಳನ್ನು ನಿಮಗೆ ಕೊಡುವರು. ಅವರಿಗೆ ಬದಲು ಕೊಡದೆ, ಅವರು ಕೊಟ್ಟುದನ್ನು ಭೋಗಿಸುವವನು ಕಳ್ಳನೇ ಸರಿ." ೧೨

**ಟಿಪ್ಪಣಿ**—ಇಲ್ಲಿ ದೇವತೆಯೆಂದರೆ ಈಶ್ವರಸೃಷ್ಟಿಯಾದ ಸರ್ವ ಭೂತಗಳು ಎಂದರ್ಥ. ಸರ್ವಭೂತಗಳ ಸೇವೆಯು ದೇವಸೇವೆ ಅದು ಯಜ್ಞ

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್

ಯಾರು ಯಜ್ಞದಿಂದುಳಿದುದನ್ನು ತಿನ್ನುವರೋ ಅವರು ಎಲ್ಲಾ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಯಾರು ತಮಗಾಗಿಯೇ ಅಡಿಗೆ ಮಾಡಿಕೊಳ್ಳುತ್ತಾರೊ ಅವರು ಪಾಪವನ್ನು ಉಣ್ಣುತ್ತಾರೆ. ೧೩

ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ

ಅನ್ನದಿಂದ ಎಲ್ಲಾ ಭೂತಗಳು ಉತ್ಪನ್ನವಾಗುತ್ತವೆ. ಅನ್ನವು ಮಳೆಯಿಂದ ಉತ್ಪನ್ನವಾಗುತ್ತದೆ. ಮಳೆಯು ಯಜ್ಞದಿಂದ ಉಂಟಾಗುತ್ತದೆ. ಯಜ್ಞವು ಕರ್ಮದಿಂದುಂಟಾಗುತ್ತದೆ. ೧೪

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ

ಕರ್ಮವು ಪ್ರಕೃತಿಯಿಂದ ಉತ್ಪನ್ನವಾಗುತ್ತದೆ, ಪ್ರಕೃತಿಯು ಅಕ್ಷರಬ್ರಹ್ಮದಿಂದ ಉತ್ಪನ್ನವಾಗುತ್ತದೆ, ಆದುದರಿಂದ ಸರ್ವವ್ಯಾಪಕ ಬ್ರಹ್ಮವು ಸದಾ ಯಜ್ಞದಲ್ಲಿ ಅಧಿಷ್ಠಿತವಾಗಿರುತ್ತದೆ, ಎಂಬುದನ್ನು ನೀನು ತಿಳಿದುಕೋ. ೧೫

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ

ಈ ರೀತಿ ಪ್ರವರ್ತಿಸುವ ಚಕ್ರವನ್ನು ಯಾರು ಅನುಸರಿಸುವದಿಲ್ಲವೊ ಆ ಮನುಷ್ಯನು ತನ್ನ ಜೀವನವನ್ನು ಪಾಪಕರವಾಗಿ ಮಾಡಿ ಇಂದ್ರಿಯಸುಖಗಳಿಗೆ ಸಿಕ್ಕಿಬಿದ್ದು ಜೀವಿಸುತ್ತಾನೆ. ಮತ್ತು, ಎಲೈ ಪಾರ್ಥನೆ, ಅವನ ಜೀವನವು ವ್ಯರ್ಥ. ೧೬

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ

ಆದರೆ ಯಾವ ಮನುಷ್ಯನು ಆತ್ಮದಲ್ಲಿ ರಮಿಸುತ್ತಾನೊ ಯಾರು ಅದರಿಂದಲೇ ತೃಪ್ತನಾಗಿರುತ್ತಾನೊ ಮತ್ತು ಅದರಲ್ಲಿಯೇ ಸಂತೋಷವನ್ನು ಕಾಣುತ್ತಾನೊ ಅವನು ಏನೂ ಮಾಡಬೇಕಾದುದಿರುವದಿಲ್ಲ. ೧೭

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ

ಮಾಡುವದರಲ್ಲಿಯೂ ಮಾಡದಿರುವದರಲ್ಲಯೂ ಅವನಿಗೆ ಸ್ವಲ್ಪವೂ ಸ್ವಾರ್ಥವಿರುವದಿಲ್ಲ. ಯಾವ ಭೂತದಲ್ಲಿಯೂ ಅವನಿಗೆ ಸ್ವಂತ ಸ್ವಾರ್ಥವಾವದೂ ಇರುವದಿಲ್ಲ. ೧೮

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ
ಅಸಕ್ತೋ ಹ್ಯಾಚರನ್ಕರ್ಮ ಪರಮಾಪ್ನೋತಿ ಪೂರುಷಃ

ಆದುದರಿಂದ ನೀನು ಸಂಗರಹಿತನಾಗಿ ನಿರಂತರವೂ ಕರ್ತವ್ಯ ಕರ್ಮವನ್ನು ಮಾಡು. ಸಂಗವಿಲ್ಲದಿದ್ದು ಕರ್ಮಗೈವ ಪುರುಷನೇ ಮೋಕ್ಷವನ್ನು ಪಡೆಯುತ್ತಾನೆ. ೧೯

ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ
ಲೋಕಸಂಗ್ರಹಮೇವಾಪಿ ಸಂಪಶ್ಯನ್ಕರ್ತುಮರ್ಹಸಿ

ಜನಕಾದಿಗಳು ಕರ್ಮದಿಂದಲೇ ಪರಮಸಿದ್ಧಿಯನ್ನೈದಿದರು. ಲೋಕಸಂಗ್ರಹದ ದೃಷ್ಟಿಯಿಂದ ಕೂಡ ನೀನು ಕರ್ಮಮಾಡುವದು ಉಚಿತವಾದುದು. ೨೦

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ

ಯಾವ ಯಾವ ಆಚರಣೆಯನ್ನು ಉತ್ತಮ ಪುರುಷರು ಮಾಡುತ್ತಾರೊ ಅದನ್ನು ಇತರ ಜನರು ಅನುಕರಿಸುತ್ತಾರೆ. ಅವರು

ಯಾವದನ್ನು ಪ್ರಮಾಣವಾಗಿ ಮಾಡುತ್ತಾರೊ ಅದನ್ನು ಜನರು ಅನುಸರಿಸುತ್ತಾರೆ. ೨೧

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ

ಹೇ ಪಾರ್ಥ, ನನಗೆ ಮೂರುಲೋಕಗಳಲ್ಲಿಯೂ ಮಾಡುವದಾವದೂ ಇಲ್ಲ. ಹೊಂದಬೇಕಾದ ಯಾವ ವಸ್ತುವನ್ನಾಗಲಿ ನಾನು ಹೊಂದಿಲ್ಲವೆಂಬುದೂ ಇಲ್ಲ. ಆದರೂ ನಾನು ಕರ್ಮದಲ್ಲಿ ಪ್ರವೃತ್ತನಾಗಿ ಇರುತ್ತೇನೆ. ೨೨

ಟಿಪ್ಪಣಿ—ಸೂರ್ಯ, ಚಂದ್ರ, ಭೂಮಿ ಮುಂತಾದವುಗಳ ವಿರಾಮವಿಲ್ಲದ ಕ್ರಮತಪ್ಪದ ಚಲನೆಯು ಈಶ್ವರನ ಕರ್ಮವನ್ನು ಸೂಚಿಸುತ್ತದೆ. ಈ ಕರ್ಮಗಳು ಮಾನಸಿಕವಲ್ಲ; ಅವನ್ನು ಶಾರೀರಿಕವೆಂದು ಹೇಳಬಹುದು. ಈಶ್ವರನು ನಿರಾಕಾರನಾಗಿದ್ದರೂ ಶಾರೀರಿಕ ಕರ್ಮವನ್ನು ಮಾಡುತ್ತಾನೆಂದು ಹೇಳಲಾಗುವದೆಂತು ಎಂಬ ಶಂಕೆಗೆ ಇಲ್ಲಿ ಆಸ್ಪದವಿಲ್ಲ. ಏಕೆಂದರೆ ಅವನು ಅಶರೀರನಾದರೂ ಶರೀರವುಳ್ಳವನ ರೀತಿಯಲ್ಲಿ ಆಚರಿಸುವವನಾಗಿ ಕಾಣಿಸಿಕೊಳ್ಳುತ್ತಾನೆ. ಆದುದರಿಂದಲೇ ಅವನು ಕರ್ಮ ಮಾಡುತ್ತಿದ್ದರೂ ಅಕರ್ಮಿಯಾಗಿಯೂ ಅಲಿಪ್ತನಾಗಿಯೂ ಇರುತ್ತಾನೆ. ಮನುಷ್ಯನು ತಿಳಿದುಕೊಳ್ಳಬೇಕಾದುದೇನೆಂದರೆ ಈಶ್ವರನ ಪ್ರತಿಯೊಂದು ಗತಿಯು ಯಂತ್ರದಹಾಗೆ ಕೆಲಸಮಾಡುತ್ತಿರುವಂತೆಯೇ ಮನುಷ್ಯನು ಕೂಡ ಬುದ್ಧಿಪೂರ್ವಕವಾಗಿ, ಆದರೂ ಯಂತ್ರದ ರೀತಿಯಲ್ಲಿಯೇ, ನಿಯಮಿತ ಕಾರ್ಯವನ್ನು ಮಾಡಬೇಕು. ಮನುಷ್ಯನ ವಿಶೇಷತೆಯಿರುವದು ಯಂತ್ರದ ಗತಿಯನ್ನು ಅನಾದರಣೆ ಮಾಡಿ ಸ್ವೇಚ್ಛಾಚಾರಿಯಾಗುವದರಲ್ಲಲ್ಲ; ಅದಿರುವದು ಜ್ಞಾನಪೂರ್ವಕವಾಗಿ ಆ ಗತಿಯನ್ನು ಅನುಸರಿಸುವದರಲ್ಲಿ. ಅಲಿಪ್ತನಾಗಿದ್ದು ಯಂತ್ರದಂತೆ ಕಾರ್ಯ ಮಾಡುವದರಿಂದ ಅವನು ರಗಳೆಗೆ ಸಿಕ್ಕುವದಿಲ್ಲ. ಅವನು ಮೃತ್ಯು ಪರ್ಯಂತ ಕಂದದೆ ಕುಂದದೆ ಇರುತ್ತಾನೆ. ದೇಹದೇಹಕ್ಕೂ ನಿಯಮಾನುಸಾರವಾಗಿ ಕಾಲಕ್ರಮೇಣ ನಷ್ಟವುದಗುತ್ತದೆ. ಆದರೆ ಅದರೊಳಗಿನ ಆತ್ಮವು ಹೇಗಿದ್ದಿತೋ ಹಾಗೆಯೇ ಇರುತ್ತದೆ.

ಯದಿ ಹ್ಯಹಂ ನವರ್ತೇಯಂ ಜಾತು ಕರ್ಮಣ್ಯತಂದ್ರಿತಃ
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ

ನಾನು ಯಾವಾಗಲೂ ವ್ಯೆವುರಿಯಲು ಕೂಡ ನಿಲ್ಲದೆ ಕರ್ಮದಲ್ಲಿ ಪ್ರವೃತ್ತನಾಗಿರದಿದ್ದರೆ, ಎಲೈ ಪಾರ್ಥನೆ, ಜನರು ಎಲ್ಲಾ ರೀತಿಯಲ್ಲಿಯೂ ನನ್ನ ಆಚರಣೆಯನ್ನು ಆಚರಿಸತೊಡಗುವರು. ೨೩

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ

ನಾನು ಕರ್ಮವನ್ನು ಮಾಡದಿದ್ದರೆ ಈ ಲೋಕಗಳು ಭ್ರಷ್ಟವಾಗುವುವು; ನಾನು ಅವ್ಯವಸ್ಥೆಯ ಕರ್ತನಾಗುವೆನು ಮತ್ತು ಈ ಲೋಕಗಳ ನಾಶವನ್ನು ಮಾಡುವವನಾಗುವೆನು. ೨೪

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ

ಹೇ ಭಾರತ, ಯಾವ ರೀತಿಯಲ್ಲಿ ಅಜ್ಞಾನಿಗಳು ಆಸಕ್ತರಾಗಿ ಕೆಲಸಮಾಡುತ್ತಾರೊ ಅದೇ ರೀತಿಯಲ್ಲೇ ಜ್ಞಾನಿಯು ಆಸಕ್ತಿಯಿಲ್ಲದವನಾಗಿ ಲೋಕಕಲ್ಯಾಣದ ಇಚ್ಛೆಯಿಂದ ಕೆಲಸ ಮಾಡಬೇಕು. ೨೫

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ
ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್

ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳ ಬುದ್ಧಿಯನ್ನು ಜ್ಞಾನಿಯು ಅಸ್ಥಿರಗೊಳಿಸಬಾರದು; ಸಮತ್ವಪೂರ್ವಕವಾಗಿ ಒಳ್ಳೆಯ ರೀತಿಯಲ್ಲಿ ಕರ್ಮಗೈದು ಅವರನ್ನು ಎಲ್ಲಾ ಕರ್ಮಗಳನ್ನೂ ಮಾಡುವಂತೆ ಪ್ರೇರಿಸಬೇಕು. ೨೬

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ
ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ

ಎಲ್ಲಾ ಕರ್ಮಗಳೂ ಪ್ರಕೃತಿಯ ಗುಣಗಳ ಮೂಲಕ ಮಾಡಿದವುಗಳಾಗಿರುತ್ತವೆ. ಅಹಂಕಾರದಿಂದ ಮೂಢನಾದ ಮನುಷ್ಯನು 'ನಾನು ಮಾಡುವವನು' ಎಂದೆಣಿಸುತ್ತಾನೆ. ೨೭

ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ
ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ

ಎಲೈ ಮಹಾಬಾಹುವೇ, ಗುಣ ಮತ್ತು ಕರ್ಮ, ಇವುಗಳ ವಿಭಾಗದ ರಹಸ್ಯವನ್ನರಿತ ಪುರುಷನು 'ಗುಣಗಳು ಗುಣಗಳಲ್ಲಿ ವರ್ತಿಸುತ್ತಿರುತ್ತವೆ' ಎಂದೆಣಿಸಿ ಅದರಲ್ಲಿ ಆಸಕ್ತನಾಗುವದಿಲ್ಲ. ೨೮

ಟಿಪ್ಪಣಿ—ಶ್ವಾಸೋಚ್ಛ್ವಾಸಗಳೇ ಮುಂತಾದ ಕ್ರಿಯೆಗಳು ತಾವಾಗಿ ತಾವೇ ನಡೆಯುತ್ತಿರುತ್ತವೆ. ಮನುಷ್ಯನು ಅವುಗಳಲ್ಲಿ ಆಸಕ್ತನಾಗುವದಿಲ್ಲ. ಆ ಅಂಗಗಳಿಗೆ ಯಾವದಾದರೂ ಜಾಡ್ಯವುಂಟಾದಾಗಲೇ ಮನುಷ್ಯನು ಅವುಗಳನ್ನು ಕುರಿತು ಯೋಚಿಸಬೇಕಾಗುತ್ತದೆ, ಎಂದರೆ, ಆ ಅಂಗಗಳಿರುವದು ಮನಸ್ಸಿಗೆ ಹೊಳೆಯುತ್ತದೆ. ಅದೇ ಪ್ರಕಾರ ಸ್ವಾಭಾವಿಕವಾಗಿ ಕರ್ಮಗಳು ತಾವಾಗಿ ತಾವೇ ನಡೆಯುತ್ತಿದ್ದರೆ ಅವುಗಳಲ್ಲಿ ಆಸಕ್ತಿಯುಂಟಾಗುವದಿಲ್ಲ. ಯಾವನ ಸ್ವಭಾವವು ಉದಾರವೋ ಅವನು ತನ್ನ ಔದಾರ್ಯವನ್ನು ಅರಿತಿರುವದೇ ಇಲ್ಲ. ಪರಂತು ಅವನು ದಾನ ಮಾಡದೆ ಇರಲಾಗುವದೇ ಇಲ್ಲ. ಇಂಥ ಅನಾಸಕ್ತಿಯು ಅಭ್ಯಾಸದಿಂದ ಮತ್ತು ಈಶ್ವರಕೃಪೆಯಿಂದ ಮಾತ್ರ ಲಭಿಸುವುದು.

ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್

ಪ್ರಕೃತಿಯ ಗುಣಗಳಿಂದ ಮೋಹಿತರಾದ ಮನುಷ್ಯರು ಗುಣಗಳಿಗೆ ಸಂಬಂಧಪಟ್ಟ ಕರ್ಮಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಜ್ಞಾನಿಗಳು ಈ ಅಜ್ಞಾನಿಗಳಾದ ಮಂದಬುದ್ಧಿಯ ಜನರನ್ನು ಅಸ್ಥಿರಗೊಳಿಸಕೂಡದು. ೨೯

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ

ಅಧ್ಯಾತ್ಮ ವೃತ್ತಿಯನ್ನಿಟ್ಟುಕೊಂಡು ಎಲ್ಲಾ ಕರ್ಮಗಳನ್ನೂ ನನ್ನಲ್ಲಿ ಅರ್ಪಣ ಮಾಡಿ ಆಸಕ್ತಿಯನ್ನೂ ಮಮತೆಯನ್ನೂ ಬಿಟ್ಟು ರಾಗರಹಿತನಾಗಿ ನೀನು ಯುದ್ಧ ಮಾಡು. ೩೦

**ಟಿಪ್ಪಣಿ**—ಶರೀರಸ್ಥನಾದ ಆತ್ಮವನ್ನು ಗುರುತಿಸಿ ಅದು ಪರಮಾತ್ಮನ ಅಂಶವೆಂದರಿತವನು ಎಲ್ಲವನ್ನೂ ಪರಮಾತ್ಮನಿಗೇ ಅರ್ಪಿಸುವನು. ಹೇಗೆಂದರೆ, ಸೇವಕನು ತನ್ನ ಸ್ವಾಮಿಯ ಆಶ್ರಯದಲ್ಲಿ ಕಾರ್ಯನಿರ್ವಾಹ ಮಾಡಿ ಎಲ್ಲವನ್ನೂ ಅವನಿಗೇ ಅರ್ಪಣ ಮಾಡುವಂತೆ.

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ
ಶ್ರದ್ಧಾವಂತೋನಸೂಯಂತೋ ಮುಚ್ಯಂತೇ ತೇಪಿ ಕರ್ಮಭಿಃ

ಶ್ರದ್ಧೆಯಿಟ್ಟು ದ್ವೇಷ ಬಿಟ್ಟು ಯಾವ ಮನುಷ್ಯರು ನನ್ನ ಈ ಮತಕ್ಕನುಸಾರವಾಗಿ ನಡೆಯುತ್ತಾರೊ ಅವರು ಕೂಡ ಕರ್ಮಬಂಧನ ದಿಂದ ಮುಕ್ತರಾಗುತ್ತಾರೆ. ೩೧

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ
ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ

ಆದರೆ ಯಾರು ನನ್ನ ಈ ಅಭಿಪ್ರಾಯದಲ್ಲಿ ದೋಷ ಹುಡುಕಿ ಅದನ್ನನುಸರಿಸುವದಿಲ್ಲವೊ ಅವರು ಜ್ಞಾನಹೀನರಾದ ಮೂರ್ಖರು. ಅವರ ನಾಶವಾಯಿತೆಂದು ತಿಳಿ. ೩೨

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ

ಜ್ಞಾನಿಗಳೂ ತಮ್ಮ ಸ್ವಭಾವಕ್ಕನುಸಾರವಾಗಿ ಆಚರಿಸುತ್ತಾರೆ; ಎಲ್ಲಾ ಪ್ರಾಣಿಗಳೂ ಸ್ವಭಾವವನ್ನನುಸರಿಸುತ್ತವೆ. ಅಲ್ಲಿ ಬಲಾತ್ಕಾರವೇನನ್ನು ಮಾಡಬಲ್ಲದು? ೩೩

**ಟಿಪ್ಪಣಿ** ಈ ಶ್ಲೋಕವು ಎರಡನೆಯ ಅಧ್ಯಾಯದ ೬೧ನೆಯ ಅಥವಾ ೬೮ನೆಯ ಶ್ಲೋಕಕ್ಕೆ ವಿರುದ್ಧವಾಗಿಲ್ಲ. ಇಂದ್ರಿಯಗಳ ನಿಗ್ರಹವನ್ನು ಮಾಡುತ್ತಾ ಮಾಡುತ್ತಾ ಮನುಷ್ಯನು ಸತ್ತುಹೋದರೂ ಸಫಲತೆಯು ಲಭಿಸದಿದ್ದರೆ ನಿಗ್ರಹವು, ಎಂದರೆ ಬಲಾತ್ಕಾರವು, ನಿರರ್ಥಕ. ಇದರಲ್ಲಿ ನಿಗ್ರಹದ ನಿಂದೆಯೇನೂ ಇಲ್ಲ, ಸ್ವಭಾವದ ಸಾಮ್ರಾಜ್ಯವು ತೋರಿಸಲ್ಪಟ್ಟಿದೆ. 'ಇದು ನನ್ನ ಸ್ವಭಾವ' ಎಂದು ಹೇಳಿ ಯಾರಾದರೂ ಕೈಕಟ್ಟಿಕೊಂಡು ಕುಳಿತುಬಿಟ್ಟರೆ ಅವನು

ಈ ಶ್ಲೋಕದ ಅರ್ಥವನ್ನು ತಿಳಿದುಕೊಂಡಿಲ್ಲ. ನಮಗೆ ಸ್ವಭಾವದ ಅರಿವಾಗುವದಿಲ್ಲ. ಇರುವ ಪದ್ಧತಿಗಳೆಲ್ಲ ಸ್ವಭಾವಗಳಲ್ಲ. ಮತ್ತು ಮೇಲಕ್ಕೇರುವದು ಆತ್ಮದ ಸ್ವಭಾವವು. ಆದುದರಿಂದ ಆತ್ಮವು ಕೆಳಗಿಳಿದಾಗ ಆದನ್ನಿದಿರುಗೊಳ್ಳುವದು ಕರ್ತವ್ಯ. ಇದನ್ನೇ ಕೆಳಗಿನ ಶ್ಲೋಕವು ಸ್ಪಷ್ಟಪಡಿಸುತ್ತದೆ.

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ

ತಮ್ಮ ತಮ್ಮ ವಿಷಯಗಳಲ್ಲಿ ಇಂದ್ರಿಯಗಳಿಗೆ ರಾಗದ್ವೇಷವಿದ್ದೇ ಇರುತ್ತದೆ. ಮನುಷ್ಯನು ಅವುಗಳಿಗೆ ವಶನಾಗಬಾರದು. ಏಕೆಂದರೆ ಅವು ಅವನ ಮಾರ್ಗಶತ್ರುಗಳು ೩೪

ಟಿಪ್ಪಣಿ—ಕಿವಿಯ ವಿಷಯವು ಕೇಳುವದು. ಯಾವದು ರುಚಿಸುವದೋ ಅದನ್ನೇ ಕೇಳಲಿಚ್ಛಿಸುವದು ಈ ರಾಗವು. ಯಾವದು ರುಚಿಸುವದಿಲ್ಲವೋ ಅದನ್ನು ಕೇಳಲು ಅನಿಚ್ಛೆಯು ಈ ದ್ವೇಷ. 'ಇದಂತು ಸ್ವಭಾವ' ನೆಂದು ಹೇಳಿ ರಾಗದ್ವೇಷಕ್ಕೆ ವಶನಾಗದೆ ಅವುಗಳನ್ನಿದಿರಿಸಬೇಕು. ಸುಖದುಃಖಗಳು ತಟ್ಟದಂತಿರುವದು ಆತ್ಮದ ಸ್ವಭಾವವು. ಆ ಸ್ವಭಾವವನ್ನು ಮನುಷ್ಯನು ಮುಟ್ಟಬೇಕು.

ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ

ಇತರರ ಧರ್ಮವು ಸುಲಭವಾಗಿದ್ದರೂ ಅದಕ್ಕಿಂತ ಆಯಾ ಮನುಷ್ಯನಿಗೆ ತನ್ನ ಧರ್ಮವೇ, ಅದು ವಿಗುಣವಾಗಿದ್ದರೂ, ಲೇಸು. ಸ್ವಧರ್ಮದಲ್ಲಿ ಮೃತ್ಯುವು ಒಳಿತು. ಪರಧರ್ಮವು ಭಯಾವಹವಾದುದು. ೩೫

ಟಿಪ್ಪಣಿ—ಸಮಾಜದಲ್ಲಿ ಒಬ್ಬನ ಧರ್ಮವು ಕಸ ಗುಡಿಸುವದಾಗಿರುತ್ತದೆ, ಇನ್ನೊಬ್ಬನ ಧರ್ಮವು ಲೆಕ್ಕವಿಡುವದಾಗಿರುತ್ತದೆ. ಲೆಕ್ಕವಿಡುವವನು ಉತ್ತಮನೆಂಬ ಎಣಿಕೆಯಿರಕೂಡದೇಕೆ ಆದರೂ ಕಸಗುಡಿಸುವವನು ತನ್ನ ಧರ್ಮವನ್ನು ತ್ಯಜಿಸಿದರೆ ಅವನು ಭ್ರಷ್ಟನಾಗುತ್ತಾನೆ, ಮತ್ತು ಸಮಾಜಕ್ಕೆ ಹಾನಿ ತಪ್ಪುತ್ತದೆ. ಈಶ್ವರನ ಬಳಿಯಲ್ಲಿ ಇವರಿಬ್ಬರ ಸೇವೆಯ ಬೆಲೆಯು ಅವರ ನಿಷ್ಠೆಗನುಸಾರವಾಗಿ ಕಟ್ಟಲ್ಪಡುವುದು. ಅಲ್ಲಿ ವ್ಯವಸಾಯದ ಮೂಲ್ಯವು ಒಂದೇ ಒಂದಾಗಿ ಇರಬಲ್ಲದು. ಇಬ್ಬರೂ ಈಶ್ವರಾರ್ಪಣ ಬುದ್ಧಿಯಿಂದ ತಮ್ಮ ತಮ್ಮ

ಕರ್ತವ್ಯವನ್ನು ಪಾಲಿಸಿದರೆ ಇಬ್ಬರೂ ಸಮಾನರೂಪವಾಗಿ ಮೋಕ್ಷಕ್ಕೆ ಅಧಿಕಾರಿಗಳಾಗುತ್ತಾರೆ

ಅರ್ಜುನ ಉವಾಚ—

ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ

ಅರ್ಜುನನೆಂದನು—

ಹೇ ವಾರ್ಷ್ಣೇಯ, ಬಲಾತ್ಕಾರದಿಂದ ತೊಡಗಿಸಲ್ಪಟ್ಟಿರುವನೋ ಎಂಬಂತೆ, ಇಚ್ಛೆಯಿಲ್ಲದಿದ್ದರೂ, ಮನುಷ್ಯನು ಯಾರ ಪ್ರೇರಣೆಯಿಂದ ಪಾಪವೆಸಗುತ್ತಾನೆ? ೩೬

ಶ್ರೀ ಭಗವಾನುವಾಚ

ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ

ಶ್ರೀ ಭಗವಂತನು ಹೇಳಿದನು—

ರಜೋಗುಣದಿಂದ ಉತ್ಪನ್ನವಾಗುವ ಇದು (ಪ್ರೇರಿಸುವ ವಸ್ತುವು) ಕಾಮ, ಕ್ರೋಧ; ಇದರ ಹೊಟ್ಟೆಯೇ ತುಂಬುವದಿಲ್ಲ. ಇದು ಮಹಾ ಪಾಪಿ. ಇದನ್ನು ಈ ಲೋಕದಲ್ಲಿ ಶತ್ರುವೆಂಬದಾಗಿ ತಿಳಿ. ೩೭

ಟಿಪ್ಪಣಿ—ನಮ್ಮ ವಾಸ್ತವಿಕ ಶತ್ರುವು ಒಳಗೆ ವಾಸಿಸುವದು—ಅದನ್ನು ಕಾಮವೆಂದು ಕರೆಯಿರಿ, ಕ್ರೋಧವೆಂದು ಕರೆಯಿರಿ—ಅದೇ ಆಗಿದೆ.

ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ

ಯಾವ ರೀತಿಯಲ್ಲಿ ಹೊಗೆಯಿಂದ ಬೆಂಕಿಯೂ, ಕೊಳೆಯಿಂದ ಕನ್ನಡಿಯೂ, ಚರ್ಮದ ಪರೆಯಿಂದ ಗರ್ಭವೂ ಮುಚ್ಚಿರುತ್ತದೆಯೊ ಅದೇ ರೀತಿಯಲ್ಲಿ ಕಾಮಾದಿರೂಪ ಶತ್ರುಗಳಿಂದ ಈ ಜ್ಞಾನವು ಮುಚ್ಚಿರುತ್ತದೆ. ೩೮

ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ

ಎಲೈ ಕೌಂತೇಯನೆ, ಇಂತಹ ತೃಪ್ತಿಪಡಿಸಲು ಶಕ್ಯವಲ್ಲದ ಈ ಕಾಮರೂಪ ಅಗ್ನಿಯು ನಿತ್ಯದ ಶತ್ರುವು. ಅದರಿಂದ ಜ್ಞಾನಿಯ ಜ್ಞಾನವು ಮುಚ್ಚಿರುತ್ತದೆ. ೩೯

ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಂ

ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ—ಇದು ಶತ್ರುವಿನ ನಿವಾಸಸ್ಥಾನವಾಗಿದೆ. ಇದರ ಮೂಲಕ ಜ್ಞಾನವನ್ನು ಮುಚ್ಚಿ ಈ ಶತ್ರುವು ದೇಹಧಾರಿಯನ್ನು ಮೂರ್ಛೆಗೊಳಿಸುತ್ತದೆ. ೪೦

ಟಿಪ್ಪಣಿ—ಇಂದ್ರಿಯಗಳಲ್ಲಿ ಕಾಮವು ವ್ಯಾಪಿಸುವದರಿಂದ ಮನವು ಮಲಿನವಾಗುತ್ತದೆ; ಅದರಿಂದ ವಿವೇಕ ಶಕ್ತಿಯು ಮಂದವಾಗುತ್ತದೆ; ಅದರಿಂದ ಜ್ಞಾನವು ನಾಶವಾಗುತ್ತದೆ. ಎರಡನೆಯ ಅಧ್ಯಾಯದ ೬೨-೬೪ನೆಯ ಶ್ಲೋಕಗಳನ್ನು ನೋಡಿ.

ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ

ಹೇ ಭರತರ್ಷಭ, ಆದುದರಿಂದ ನೀನು ಮೊದಲು ಇಂದ್ರಿಯಗಳನ್ನು ನಿಯಮದಲ್ಲಿಟ್ಟು ಜ್ಞಾನ ಮತ್ತು ಅನುಭವವನ್ನು ನಾಶಗೊಳಿಸತಕ್ಕ ಈ ಪಾಪಿಯನ್ನು ಅವಶ್ಯವಾಗಿ ತ್ಯಜಿಸು. ೪೧

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ

ಇಂದ್ರಿಯಗಳು ಸೂಕ್ಷ್ಮವಾಗಿವೆ; ಮನಸ್ಸು ಅವುಗಳಿಗಿಂತ ಸೂಕ್ಷ್ಮವಾದುದು; ಅದಕ್ಕಿಂತ ಸೂಕ್ಷ್ಮವು ಬುದ್ಧಿಯು. ಬುದ್ಧಿಗಿಂತ ಸೂಕ್ಷ್ಮವಾಗಿರುವಂತಹುದು ಆತ್ಮವು. ೪೨

ಟಿಪ್ಪಣಿ—ತಾತ್ಪರ್ಯವೇನೆಂದರೆ, ಇಂದ್ರಿಯಗಳು ವಶದಲ್ಲಿದ್ದರೆ ಸೂಕ್ಷ್ಮವಾದ ಕಾಮವನ್ನು ಗೆಲ್ಲುವದು ಸಹಜವಾಗುವುದು.

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ

**ಈ ರೀತಿಯಾಗಿ ಬುದ್ಧಿಗೆ ಅತೀತವಾದ ಆತ್ಮನನ್ನು ಗುರುತು ಹಿಡಿದು ಆತ್ಮದ ಮೂಲಕ ಮನಸ್ಸನ್ನು ವಶಪಡಿಸಿಕೊಂಡು, ಎಲೈ ಮಹಾಬಾಹುವೇ ಕಾಮವೆಂಬ ದುರ್ಜಯ ಶತ್ರುವನ್ನು ಸಂಹರಿಸು.** ೪೩

**ಟಿಪ್ಪಣಿ**—ಮನುಷ್ಯನು ಶರೀರಸ್ಥವಾದ ಆತ್ಮವನ್ನರಿತುಕೊಂಡರೆ ಮನಸ್ಸು ಅವನ ವಶದಲ್ಲಿರುವುದು, ಇಂದ್ರಿಯಗಳ ವಶದಲ್ಲಿರುವದಿಲ್ಲ. ಮತ್ತು ಮನಸ್ಸು ಗೆಲ್ಲಲ್ಪಟ್ಟ ಮೇಲೆ ಕಾಮವೇನು ಮಾಡಬಲ್ಲದು ?

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತಾ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಕರ್ಮಯೋಗವೆಂಬ ಮೂರನೆಯ ಅಧ್ಯಾಯವು ಸಮಾಪ್ತವಾದುದು.



೪

# ಜ್ಞಾನಕರ್ಮಸಂನ್ಯಾಸಯೋಗ



ಈ ಅಧ್ಯಾಯದಲ್ಲಿ ಮೂರನೆಯ ಅಧ್ಯಾಯದ ವಿಶೇಷ ವಿವೇಚನೆಯಿದೆ ಮತ್ತು ಭಿನ್ನಭಿನ್ನ ರೀತಿಯ ಹಲವು ಯಜ್ಞಗಳ ವರ್ಣನೆಯಿದೆ.

ಶ್ರೀ ಭಗವಾನುವಾಚ—

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ
ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಬ್ರವೀತ್

ಶ್ರೀ ಭಗವಂತನು ಹೇಳಿದನು:—

ಈ ಅವಿನಾಶಿಯಾದ ಯೋಗವನ್ನು ನಾನು ವಿವಸ್ವಾನ (ಸೂರ್ಯ)ನಿಗೆ ಹೇಳಿದೆನು. ಅವನು ಮನುವಿಗೂ ಮನುವು ಇಕ್ಷ್ವಾಕುವಿಗೂ ಹೇಳಿದರು. ೧

ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ

ಹೀಗೆ ಪರಂಪರೆಯಿಂದ ಲಭಿಸಿದ ಮತ್ತು ರಾಜರ್ಷಿಗಳು ತಿಳಿದುಕೊಂಡ ಆ ಯೋಗವು ದೀರ್ಘಕಾಲದ ಬಲದಿಂದ ನಷ್ಟವಾಯಿತು. ೨

ಸ ಏವಾಯಂ ಮಯಾ ತೇದ್ಯ ಯೋಗಃ ಪ್ರೋಕ್ತಃ ಪುರಾತನಃ
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ

ಆ ಪುರಾತನ ಯೋಗವನ್ನೇ ನಾನು ಇಂದು ನಿನಗೆ ಬೋಧಿಸಿದುದು. ಏಕೆಂದರೆ ನೀನು ಭಕ್ತನಾಗಿದ್ದೀಯೆ ಮತ್ತು ಈಯೋಗವು ಉತ್ತಮ ರಹಸ್ಯದ ವಿಷಯವಾಗಿದೆ. ೩

ಅರ್ಜುನವಾಚ—

ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ

ಅರ್ಜುನನೆಂದನು—

ನಿನ್ನ ಜನ್ಮವಾದರೊ ಇಂದಿನದು ; ವಿವಸ್ವಾನನ ಜನ್ಮವು ಹಿಂದೆಯೇ ಆದುದು. ಇಂತಹ ಸ್ಥಿತಿಯಲ್ಲಿ ನೀನು ಅದನ್ನು (ಯೋಗವನ್ನು) ಮುಂಚೆಯೇ ಹೇಳಿದ್ದೆಯೆಂದು ನಾನು ತಿಳಿಯುವದೆಂತು ? ೪

ಶ್ರೀ ಭಗವಾನುವಾಚ –

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ

ಶ್ರೀಭಗವಂತನೆಂದನು—

ಹೇ ಅರ್ಜುನ, ನನ್ನ ಮತ್ತು ನಿನ್ನ ಜನ್ಮಗಳು ಅನೇಕವಾಗಿ ಹೋಗಿವೆ. ಅವುಗಳೆಲ್ಲವನ್ನೂ ನಾನು ಅರಿತಿರುವೆನು, ನೀನು ಅರಿತಿಲ್ಲ. ೫

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ

ನಾನು ಜನ್ಮವಿಲ್ಲದವನು, ಅವಿನಾಶಿಯು ಮತ್ತು ಎಲ್ಲಾ ಭೂತಗಳ ಸ್ವಾಮಿಯು. ಆದರೂ ನನ್ನ ಸ್ವಭಾವವನ್ನನುಸರಿಸಿ ನನ್ನ ಮಾಯೆಯ ಬಲದಿಂದ ನಾನು ಜನ್ಮಧಾರಣೆ ಮಾಡುತ್ತೇನೆ. ೬

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ

ಹೇ ಭಾರತ, ಯಾವ ಯಾವ ಕಾಲದಲ್ಲಿ ಧರ್ಮವು ಮಂದಗತಿಯುಳ್ಳದಾಗುತ್ತದೆಯೊ, ಅಧರ್ಮವು ಪ್ರಬಲವಾಗುತ್ತದೆಯೊ, ಆಯಾ ಕಾಲಗಳಲ್ಲಿ ನಾನು ಜನ್ಮಧಾರಣೆ ಮಾಡುತ್ತೇನೆ. ೭

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ

ಸಾಧುಗಳ ರಕ್ಷಣೆಗೋಸ್ಕರ, ದುಷ್ಟರ ವಿನಾಶಕ್ಕೋಸ್ಕರ ಮತ್ತು ಧರ್ಮದ ಪುನರುದ್ಧಾರವನ್ನು ಮಾಡುವದಕ್ಕೋಸ್ಕರ ಯುಗಯುಗದಲ್ಲಿಯೂ ನಾನು ಜನ್ಮತಾಳುತ್ತೇನೆ. ೮

ಟಿಪ್ಪಣಿ—ಇಲ್ಲಿ ಶ್ರದ್ಧಾವಂತರಿಗೆ ಆಶ್ವಾಸನ [ಪ್ರೋತ್ಸಾಹ]ವೂ ಸತ್ಯದ—ಧರ್ಮದ—ಅವಿಚಲತೆಯ ಪ್ರತಿಜ್ಞೆಯೂ ಇದೆ. ಈ ಪ್ರಪಂಚದಲ್ಲಿ ಏರಿಳಿತಗಳಾಗುತ್ತಲೇ ಇರುತ್ತವೆ ಪರಂತು ಕಡೆಯಲ್ಲಿ ಧರ್ಮಕ್ಕೇ ಜಯವಾಗುತ್ತದೆ. ಸಂತರ ನಾಶವಾಗುವದಿಲ್ಲ; ಏಕೆಂದರೆ ಅಸತ್ಯಕ್ಕೆ ಅಸ್ತಿತ್ವವೇ ಇಲ್ಲ. ಇದನ್ನು ತಿಳಿದುಕೊಂಡು ಮನುಷ್ಯನು ತಾನು ಕರ್ತನೆಂಬ ಅಭಿಮಾನದಿಂದ ಹಿಂಸೆಯನ್ನು ಮಾಡಬಾರದು, ದುರಾಚಾರವನ್ನು ಮಾಡಬಾರದು. ಈಶ್ವರನ ಗಹನವಾದ ಮಾಯೆಯು ತನ್ನ ಕೆಲಸವನ್ನು ಮಾಡುತ್ತಲೇ ಇರುತ್ತದೆ. ಇದೇ ಅವತಾರವು ಅಥವಾ ಈಶ್ವರನ ಜನ್ಮವು ವಸ್ತುತಃ ಈಶ್ವರನ ಪಾಲಿಗೆ ಹುಟ್ಟುವಿಕೆಯೆಂಬುದೇ ಇಲ್ಲ.

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ

ಈ ರೀತಿಯಾಗಿ ನನ್ನ ದಿವ್ಯ ಜನ್ಮದ ಮತ್ತು ಕರ್ಮದ ರಹಸ್ಯವನ್ನು ಅರಿತುಕೊಳ್ಳುವವನು, ಎಲೈ ಅರ್ಜುನನೆ, ಶರೀರವನ್ನು ತ್ಯಜಿಸಿ ಪುನರ್ಜನ್ಮವನ್ನು ಪಡೆಯುವದಿಲ್ಲ; ಆದರೆ ನನ್ನನ್ನು ಪಡೆಯುತ್ತಾನೆ. ೯

ಟಿಪ್ಪಣಿ—ಏಕೆಂದರೆ ಮನುಷ್ಯನಿಗೆ ಈಶ್ವರನು ಸತ್ಯಕ್ಕೇ ಜಯವುಂಟು ಮಾಡುತ್ತಾನೆಂಬ ದೃಢವಿಶ್ವಾಸವುಂಟಾದ ಮೇಲೆ ಅವನು ಸತ್ಯವನ್ನು ಬಿಡುವದಿಲ್ಲ, ತಾಳ್ಮೆಯಿಂದಿರುತ್ತಾನೆ, ದುಃಖವನ್ನು ಸಹಿಸುತ್ತಾನೆ; ಮತ್ತು ಮಮತಾರಹಿತನಾಗಿರುವ ಕಾರಣ ಜನ್ಮಮರಣದ ಚಕ್ರದಿಂದ ಮುಕ್ತನಾಗಿ ಈಶ್ವರನ ಧ್ಯಾನವನ್ನೇ ಧಾರಣೆ ಮಾಡಿ ಅದರಲ್ಲಿಯೇ ಲೀನನಾಗಿ ಬಿಡುತ್ತಾನೆ.

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ

ರಾಗ, ಭಯ, ಕ್ರೋಧ, ಇವುಗಳಿಲ್ಲದವರಾಗಿ, ನನ್ನ ಧ್ಯಾನವನ್ನೇ ಮಾಡುತ್ತಾ, ನನ್ನನ್ನೇ ಆಶ್ರಯಿಸಿ, ಜ್ಞಾನವೆಂಬ ತಪಸ್ಸಿನಿಂದ ಪವಿತ್ರರಾದ ಅನೇಕ ಮಂದಿ ನನ್ನ ಸ್ವರೂಪವನ್ನು ಹೊಂದಿದ್ದಾರೆ. ೧೦

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ

ಯಾರು ನನ್ನನ್ನು ಯಾವ ಪ್ರಕಾರವಾಗಿ ಆಶ್ರಯಿಸುತ್ತಾರೋ ನಾನು ಅವರಿಗೆ ಅದೇ ಪ್ರಕಾರವಾಗಿಯೇ ಫಲ ಕೊಡುತ್ತೇನೆ. ಯಾವ ರೀತಿಯಾದರೂ ಆಗಲಿ, ಎಲೈ ಪಾರ್ಥನೆ, ಮನುಷ್ಯರು ನನ್ನ ಮಾರ್ಗವನ್ನನುಸರಿಸುತ್ತಾರೆ — ನನ್ನ ಶಾಸನಕ್ಕಧೀನರಾಗಿರುತ್ತಾರೆ. ೧೧

ಟಿಪ್ಪಣಿ—ತಾತ್ಪರ್ಯ :- ಯಾರೂ ಈಶ್ವರನ ನಿಯಮವನ್ನು ಉಲ್ಲಂಘಿಸಲಾಗುವದಿಲ್ಲ. ಬೆಳೆದಂತೆಯೇ ಕುಯಿಲು. ಮಾಡಿದಂತೆಯೇ ಫಲಪ್ರಾಪ್ತಿ. ಈಶ್ವರೀ ಕಾನೂನಿನಲ್ಲಿ—ಕರ್ಮದ ನಿಯಮದಲ್ಲಿ—ಅಪವಾದವು (ನಿಯಮಕ್ಕೆ ಸಿಕ್ಕದುದು) ಇಲ್ಲ. ಎಲ್ಲರಿಗೂ ಸಮನಾಗಿ ಎಂದರೆ ಅವರವರ ಯೋಗ್ಯತೆಗನುಸಾರವಾಗಿ ನ್ಯಾಯವು ದೊರಕುತ್ತದೆ.

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ

ಕರ್ಮದ ಸಿದ್ಧಿಯನ್ನು ಬಯಸುವವರು ಈ ಲೋಕದಲ್ಲಿ ದೇವತೆಗಳನ್ನು ಪೂಜಿಸುತ್ತಾರೆ. ಇದರಿಂದ ಅವರಿಗೆ ಕರ್ಮಜನಿತವಾದ ಫಲವು ಶೀಘ್ರವಾಗಿ ಮನುಷ್ಯಲೋಕದಲ್ಲಿಯೇ ದೊರಕುತ್ತದೆ. ೧೨

ಟಿಪ್ಪಣಿ—ದೇವತೆಗಳೆಂದರೆ ಸ್ವರ್ಗದಲ್ಲಿ ವಾಸಿಸುವ ಇಂದ್ರ ವರುಣಾದಿ ವ್ಯಕ್ತಿಗಳಲ್ಲ. ದೇವತೆಯೆಂದರೆ ಈಶ್ವರನ ಅಂಶರೂಪದ ಶಕ್ತಿ. ಈ ಅರ್ಥದಲ್ಲಿ ಮನುಷ್ಯನು ಕೂಡ ದೇವತೆಯೇ. ಆವಿ, ಮಿಂಚು, ಮುಂತಾದ ಮಹಾ

ಶಕ್ತಿಗಳೂ ದೇವತೆಗಳು. ಇವುಗಳ ಆರಾಧನೆಯ ಫಲವು ಒಡನೆಯೇ ಮತ್ತು ಈ ಲೋಕದಲ್ಲಿಯೇ ದೊರೆಯುತ್ತಿರುವದನ್ನು ನಾವು ನೋಡುತ್ತೇವೆ. ಅದು ಆತ್ಮಕ್ಕೆ ಸಂತೋಷ ಕೊಡುವದಿಲ್ಲವೆಂದಮೇಲೆ ಮೋಕ್ಷವನ್ನಂತು ಕೊಡುವದು ತಾನೆ ಹೇಗೆ?

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ

ಗುಣ ಮತ್ತು ಕರ್ಮದ ವಿಭಾಗಾನುಸಾರವಾಗಿ ನಾನು ನಾಲ್ಕು ವರ್ಣಗಳನ್ನು ಸೃಷ್ಟಿಸಿದ್ದೇನೆ. ನಾನು ಇವುಗಳ ಕರ್ತನಾದರೂ ನನ್ನನ್ನು ನೀನು ಅವಿನಾಶಿಯೆಂದೂ ಕರ್ತನಲ್ಲವೆಂದೂ ತಿಳಿ. ೧೩

ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ

ನನ್ನನ್ನು ಕರ್ಮವು ಮುಟ್ಟುವದಿಲ್ಲ. ನನಗೆ ಇದರ ಫಲದ ಆಸೆಯಿಲ್ಲ. ಈ ಪ್ರಕಾರ ನನ್ನನ್ನು ಯಾರು ಚೆನ್ನಾಗಿ ಅರಿಯುವರೊ ಅವರು ಕರ್ಮದ ಬಂಧನಕ್ಕೆ ಸಿಕ್ಕುವದಿಲ್ಲ. ೧೪

ಟಿಪ್ಪಣಿ—ಏಕೆಂದರೆ ಮನುಷ್ಯನಿದಿರಿಗೆ ಕರ್ಮ ಮಾಡುತ್ತಿದ್ದರೂ ಅಕರ್ಮಿಯಾಗಿರುವದರ ಸರ್ವೋತ್ತಮ ದೃಷ್ಟಾಂತವಿದೆ. ಮತ್ತು ಎಲ್ಲದರ ಕರ್ತನೂ ಈಶ್ವರನೇ ಆಗಿದ್ದಾನೆ. ನಾವು ಕೇವಲ ನಿಮಿತ್ತಮಾತ್ರರಾಗಿದ್ದೇವೆ. ಹಾಗಾದಮೇಲೆ ಕರ್ತೃತ್ವದ ಅಭಿಮಾನವು ಹೇಗುಂಟಾದೀತು?

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ

ಇದನ್ನರಿತು ಮೊದಲಿನ ಮುಮುಕ್ಷುಗಳು ಕರ್ಮವನ್ನು ಮಾಡಿದ್ದಾರೆ. ಆದುದರಿಂದ ನೀನೂ ಪೂರ್ವಜರು ಯಾವಾಗಿನಿಂದಲೂ ಮಾಡುತ್ತಾ ಬಂದಿರುವಂತೆ ಮಾಡು. ೧೫

ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್

ಕರ್ಮವೆಂದರೇನು, ಅಕರ್ಮವೆಂದರೇನು, ಎಂಬ ವಿಷಯ ವಾಗಿ ತಿಳಿವಳಿಕೆಯ ಜನರು ಕೂಡ ಮೋಹದಲ್ಲಿ ಬಿದ್ದಿದ್ದಾರೆ. ಆ ಕರ್ಮದ ವಿಷಯವನ್ನು ನಾನು ನಿನಗೆ ಚೆನ್ನಾಗಿ ತಿಳಿಸುತ್ತೇನೆ. ಅದನ್ನು ತಿಳಿದುಕೊಂಡರೆ ನೀನು ಅಶುಭದಿಂದ ಪಾರಾಗುವೆ. ೧೬

ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ

ಕರ್ಮ, ನಿಷಿದ್ಧಕರ್ಮ ಮತ್ತು ಅಕರ್ಮ, ಇವುಗಳ ಭೇದ ವನ್ನು ಅರಿತುಕೊಳ್ಳಬೇಕು. ಕರ್ಮದ ಗತಿಯು ಗೂಢವಾದುದು. ೧೭

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ
ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್

ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಕಾಣುವವನು ಜನರಲ್ಲಿ ಬುದ್ಧಿವಂತನೆಂದೆಣಿಸಲ್ಪಡುತ್ತಾನೆ. ಅವನು ಯೋಗಿ. ಅವನು ಸಂಪೂರ್ಣ ಕರ್ಮ ಮಾಡುವವನು. ೧೮

ಟಿಪ್ಪಣಿ—ಕರ್ಮಗೈಯುತ್ತಿದ್ದರೂ ಯಾರು ಕರ್ತೃತ್ವದ ಅಭಿಮಾನ ವನ್ನಿಟ್ಟುಕೊಳ್ಳುವದಿಲ್ಲವೊ ಅವನ ಕರ್ಮವು ಅಕರ್ಮವಾಗಿರುತ್ತದೆ; ಮತ್ತು ಯಾರು ಹೊರಗಿನಿಂದ ಕರ್ಮದ ತ್ಯಾಗವನ್ನು ಮಾಡುತ್ತಿದ್ದರೂ ಮನಸ್ಸಿನಲ್ಲಿ ಉಪ್ಪರಿಗೆಯನ್ನು ಕಟ್ಟುತ್ತಲೇ ಇರುತ್ತಾನೊ ಅವನ ಅಕರ್ಮವು ಕರ್ಮವಾಗಿರುತ್ತದೆ. ವಾಯು ಹಿಡಿದಿರುವವನು ಇಚ್ಛೆಪಟ್ಟು—ಅಭಿಮಾನಪೂರ್ವಕವಾಗಿ—ಕೆಲಸ ಮಾಡದೆ ಬಿದ್ದಿರುವ ಅಂಗವನ್ನು ಅಲ್ಲಾಡಿಸಿದರೆ ಅದು ಅಲ್ಲಾಡುತ್ತದೆ. ಈ ರೋಗಿಯು ಅಂಗವನ್ನು ಅಲ್ಲಾಡಿಸುವ ಕ್ರಿಯೆಯ ಕರ್ತನಾದನು. ಆತ್ಮದ ಗುಣವು ಕರ್ತೃವಲ್ಲದವನ ಗುಣವಾಗಿದೆ. ಯಾರು ಮೂರ್ಛಿತನಾಗಿ ತಾನೇ ಕರ್ತನೆಂದು ಭಾವಿಸುವನೊ ಅವನ ಆತ್ಮಕ್ಕೆ ವಾಯು ಹಿಡಿದಂತೆ; ಮತ್ತು ಅವನು ಅಭಿಮಾನಿಯಾಗಿ ಕರ್ಮ ಮಾಡುತ್ತಾನೆ. ಈ ರೀತಿಯಲ್ಲಿ ಕರ್ಮದ ಗತಿಯನ್ನರಿತವನೇ ಧೀಮಂತನಾದ, ಯೋಗಿಯಾದ, ಕರ್ತವ್ಯಪರಾಯಣನೆಂದೆಣಿಸಲ್ಪಡುತ್ತಾನೆ. "ನಾನು ಮಾಡುತ್ತೇನೆ" ಎಂದು ಭಾವಿಸುವವನು ಕರ್ಮ—ವಿಕರ್ಮಗಳ ಭೇದವನ್ನು ಮರೆಯುತ್ತಾನೆ; ಮತ್ತು ಸಾಧನದ ಒಳಿತು-ಕೆಡಕಿನ ವಿಚಾರ ಮಾಡುವದಿಲ್ಲ. ಆತ್ಮದ ಸ್ವಾಭಾವಿಕ ಗತಿಯು ಮೇಲ್ಮುಖವಾದುದು. ಆದುದ

ರಿಂದ ಮನುಷ್ಯನು ನೀತಿ ತಪ್ಪಿದಾಗ ಅವನಲ್ಲಿ ಅಹಂಕಾರವು ಅವಶ್ಯವಾಗಿ ಇದೆಯೆಂದು ಹೇಳಬಹುದು. ಅಭಿಮಾನವಿಲ್ಲದೆ ಪುರುಷನ ಕರ್ಮಗಳು ಸಹಜವಾಗಿಯೇ ಸಾತ್ವಿಕವಾಗಿರುತ್ತವೆ

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ

ಯಾರ ಎಲ್ಲಾ ಆರಂಭ [ಪ್ರಯತ್ನ] ಗಳೂ ಆಸೆ ಮತ್ತು ಸಂಕಲ್ಪ, ಇವುಗಳಿಲ್ಲದೆ ಇರುತ್ತವೆಯೊ ಅವನ ಕರ್ಮಗಳು ಜ್ಞಾನವೆಂಬ ಅಗ್ನಿಯ ಮೂಲಕ ಬೂದಿಯಾಗಿಬಿಟ್ಟಿರುತ್ತವೆ. ಅಂತಹನನ್ನು ಜ್ಞಾನಿಗಳು ಪಂಡಿತನೆಂದು ಕರೆಯುತ್ತಾರೆ. ೧೯

ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ
ಕರ್ಮಣ್ಯಭಿಪ್ರವೃತ್ತೋಽಪಿ ನೈವಕಿಂಚಿತ್ಕರೋತಿ ಸಃ

ಯಾರು ಕರ್ಮಫಲವನ್ನು ತ್ಯಜಿಸಿದ್ದಾನೋ, ಯಾರು ಸದಾ ಸಂತುಷ್ಟನಾಗಿರುತ್ತಾನೊ, ಯಾರಿಗೆ ಯಾರೊಬ್ಬರ ಆಶ್ರಯದ ಆಸೆಯಿಲ್ಲವೊ, ಅವನು ಕರ್ಮದಲ್ಲಿ ಚೆನ್ನಾಗಿ ಪ್ರವೃತ್ತನಾಗಿರುತ್ತಿದ್ದರೂ ಏನೂ ಮಾಡುವದಿಲ್ಲವೆಂದು ಹೇಳಬೇಕು. ೨೦

ಟಿಪ್ಪಣಿ—ಎಂದರೆ ಅವನು ಕರ್ಮದ ಬಂಧನವನ್ನು ಭೋಗಿಸಬೇಕಾಗುವದಿಲ್ಲ

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ

ಯಾರು ಆಶಾರಹಿತನಾಗಿದ್ದಾನೊ, ಯಾರ ಮನಸ್ಸು ತನ್ನ ವಶದಲ್ಲಿದೆಯೊ, ಯಾರು ಸಂಗ್ರಹ [ಕೂಡಿಸುವದು] ವೆಲ್ಲವನ್ನೂ ಬಿಟ್ಟುಬಿಟ್ಟಿದ್ದಾನೊ, ಮತ್ತು ಯಾರ ಶರೀರವು ಮಾತ್ರ ಕರ್ಮ ಮಾಡುತ್ತದೆಯೊ, ಅವನು [ಹಾಗೆ ಕರ್ಮ] ಮಾಡುತ್ತಿದ್ದರೂ ದೋಷಿಯಾಗುವದಿಲ್ಲ. ೨೧

ಟಿಪ್ಪಣಿ— ಅಭಿಮಾನಪೂರ್ವಕವಾಗಿ ಮಾಡಿದ ಕರ್ಮವೆಲ್ಲವೂ, ಅದು ಎಷ್ಟೇ ಸಾತ್ವಿಕವಾಗಿದ್ದರೂ, ಬಂಧನವನ್ನುಂಟುಮಾಡತಕ್ಕದು. ಅದು ಈಶ್ವ

ರಾರ್ಪಣ ಬುದ್ಧಿಯಿಂದ, ಅಭಿಮಾನವಿಲ್ಲದೆ, ನಡೆದರೆ ಬಂಧನರಹಿತವಾಗುತ್ತದೆ. ಯಾರ 'ನಾನು' [ಎಂಬ ಅರಿವು] ಶೂನ್ಯತೆಯನ್ನೈದಿದೆಯೊ ಅವನ ಶರೀರವೇ ಎಲ್ಲಾ ಕರ್ಮವನ್ನೂ ಮಾಡುತ್ತದೆ. ಇಷ್ಟೇ ಮಾಡುತ್ತಿರುವವನ ಶರೀರವೇ ಎಲ್ಲಾ ಕರ್ಮಗಳನ್ನೂ ಮಾಡುತ್ತದೆಯೆಂದು ಹೇಳಬಹುದು. ಯಾವ ಕೈದಿಯ ಬಲವು [ಅವನ] ಇಚ್ಛೆಯಿಲ್ಲದೆ ನೇಗಿಲು ಹೊಡೆಯುತ್ತದೆಯೊ ಅವನ ಶರೀರವು ಮಾತ್ರ ಕೆಲಸ ಮಾಡುತ್ತದೆ. ಯಾರು ತನ್ನ ಇಚ್ಛೆಯಿಂದ ಈಶ್ವರನ ಕೈದಿಯಾಗಿದ್ದಾನೊ ಅವನ ಶರೀರವು ಕೂಡ ತಾನು ಮಾತ್ರ ಎಲ್ಲಾ ಕೆಲಸವನ್ನೂ ಮಾಡುತ್ತದೆ [ಅಂತ ಹನು] ತಾನು ಶೂನ್ಯನಾಗಿದ್ದಾನೆ, ಈಶ್ವರನು ಪ್ರೇರಕನಾಗಿದ್ದಾನ

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ

ಯಾರು ಸಹಜವಾಗಿ ಪ್ರಾಪ್ತವಾದುದರಿಂದ ಸಂತುಷ್ಟನಾಗಿರುತ್ತಾನೊ, ಯಾರು ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾಗಿದ್ದಾನೊ, ಯಾರು ದ್ವೇಷವಿಲ್ಲದವನಾಗಿದ್ದಾನೊ, ಯಾರು ಸಫಲತೆ ನಿಷ್ಫಲತೆಗಳ ವಿಷಯದಲ್ಲಿ ತಟಸ್ಥನಾಗಿದ್ದಾನೊ, ಅವನು ಕಾರ್ಯಗೈಯುತ್ತಿದ್ದರೂ ಬಂಧನದಲ್ಲಿ ಬೀಳುವದಿಲ್ಲ. ೨೨

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ

ಯಾರು ಆಸಕ್ತಿಯಿಲ್ಲದವನಾಗಿದ್ದಾನೊ, ಯಾರ ಚಿತ್ತವು ಜ್ಞಾನಮಯವಾಗಿದೆಯೊ, ಯಾರು ಮುಕ್ತನೊ, ಮತ್ತು ಯಾರು ಯಜ್ಞಾರ್ಥವಾಗಿಯೇ ಕರ್ಮಮಾಡುವವನಾಗಿದ್ದಾನೊ, ಅವನ ಕರ್ಮಗಳೆಲ್ಲವೂ ಲಯವಾಗುತ್ತವೆ. ೨೩

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ

(ಯಜ್ಞದಲ್ಲಿ) ಅರ್ಪಣವು ಬ್ರಹ್ಮ, ಹವನದ ವಸ್ತುವು—ಹವಿಸ್ಸು—ಬ್ರಹ್ಮ, ಬ್ರಹ್ಮರೂಪಿಯಾದ ಅಗ್ನಿಯಲ್ಲಿ ಹವನಮಾಡುವವನೂ ಬ್ರಹ್ಮವು. ಈ ಪ್ರಕಾರವಾಗಿ ಕರ್ಮದೊಡನೆ ಯಾರು

ಬ್ರಹ್ಮವನ್ನು ಸೇರಿಸಿದ್ದಾನೊ ಅವನು ಬ್ರಹ್ಮವನ್ನೇ ಪಡೆಯುತ್ತಾನೆ. ೨೪

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ

ಇತರ ಎಷ್ಟೋ ಮಂದಿ ಯೋಗಿಗಳು ದೇವತೆಗಳ ಪೂಜೆಯೆಂಬ ಯಜ್ಞವನ್ನು ಮಾಡುತ್ತಾರೆ. ಇನ್ನೂ ಇತರರು ಬ್ರಹ್ಮರೂಪ ಅಗ್ನಿಯಲ್ಲಿ ಯಜ್ಞದ ಮೂಲಕ ಯಜ್ಞವನ್ನೇ ಹೋಮ ಮಾಡುತ್ತಾರೆ. ೨೫

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ
ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ

ಮತ್ತೂ ಕೆಲವರು ಶ್ರವಣಾದಿ [ಕಿವಿ ಮುಂತಾದ] ಇಂದ್ರಿಯಗಳ ಸಂಯಮರೂಪವಾದ ಯಜ್ಞವನ್ನು ಮಾಡುತ್ತಾರೆ. ಬೇರೆ ಹಲವರು ಶಬ್ದವೇ ಮುಂತಾದ ವಿಷಯಗಳನ್ನು [ವಿಷಯವಸ್ತುಗಳನ್ನು] ಇಂದ್ರಿಯಾಗ್ನಿಯಲ್ಲಿ ಹೋಮ ಮಾಡುತ್ತಾರೆ. ೨೬

ಟಿಪ್ಪಣಿ—ಕೇಳುವದು ಮುಂತಾದ ಕ್ರಿಯೆಗಳನ್ನು ಸಂಯಮ ಮಾಡುವದೊಂದು ವಿಷಯ; ಇಂದ್ರಿಯಗಳಿಂದ ಕೆಲಸ ಮಾಡಿಸುತ್ತಾ ಅವುಗಳ ವಿಷಯ—[ವಸ್ತು] ಗಳನ್ನು ಪ್ರಭು ಪ್ರೀತ್ಯರ್ಥವಾಗಿ ಉಪಯೋಗಿಸುವದು ಬೇರೆ ವಿಷಯ. ಉದಾ: ಭಜನಾದಿಗಳನ್ನು ಕೇಳುವದು. ವಸ್ತುತಃ ಎರಡೂ ಒಂದೇ.

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ

ಇನ್ನೂ ಇತರರು ಸಮಸ್ತ ಇಂದ್ರಿಯ ಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಜ್ಞಾನವೆಂಬ ದೀಪದಿಂದ ಪ್ರಜ್ವಲಿತವಾದ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮಮಾಡುತ್ತಾರೆ. ೨೭

ಟಿಪ್ಪಣಿ—ಎಂದರೆ ಪರಮಾತ್ಮನಲ್ಲಿ ತನ್ಮಯರಾಗುತ್ತಾರೆ

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ

ಈ ಪ್ರಕಾರವಾಗಿ ಕೆಲವರು ಯಜ್ಞಾರ್ಥವಾಗಿ ದ್ರವ್ಯವನ್ನು ಕೊಡುವವರಾಗುತ್ತಾರೆ; ಕೆಲವರು ತಪಸ್ಸನ್ನು ಮಾಡುವವರಾಗುತ್ತಾರೆ. ಎಷ್ಟೋ ಮಂದಿ ಅಷ್ಟಾಂಗ ಯೋಗವನ್ನು ಸಾಧಿಸುವವರಾಗುತ್ತಾರೆ. ಎಷ್ಟೋ ಜನರು ಸ್ವಾಧ್ಯಾಯವನ್ನೂ ಜ್ಞಾನಯಜ್ಞವನ್ನೂ ಮಾಡುತ್ತಾರೆ. ಇವರೆಲ್ಲರೂ ಕಠಿಣ ವ್ರತಧಾರಿಗಳೂ ಪ್ರಯತ್ನಶೀಲರೂ ಆದ ಯಾಜ್ಞಿಕರು. ೨೮

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ

ಪ್ರಾಣಾಯಾಮದಲ್ಲಿ ತತ್ಪರರಾಗಿರುವ ಇತರರು ಅಪಾನದಲ್ಲಿ ಪ್ರಾಣವಾಯುವನ್ನು ಹೋಮಮಾಡುತ್ತಾರೆ ; ಪ್ರಾಣದಲ್ಲಿ ಅಪಾನವನ್ನು ಹೋಮಮಾಡುತ್ತಾರೆ ; ಅಥವಾ ಪ್ರಾಣ ಮತ್ತು ಅಪಾನ, ಇವೆರಡನ್ನೂ ಅವರೋಧಿಸು [ತಡೆಯು]ತ್ತಾರೆ. ೨೯

ಟಿಪ್ಪಣಿ—ಇವು ಮೂರು ತೆರನಾದ ಪ್ರಾಣಾಯಾಮಗಳು– **ರೇಚಕ, ಪೂರಕ** ಮತ್ತು ಕುಂಭಕ. ಸಂಸ್ಕೃತದಲ್ಲಿ ಪ್ರಾಣವಾಯುವಿನ ಅರ್ಥವು ಗುಜರಾತಿಯ ಅರ್ಥಕ್ಕೆ ಬಲಿಕೆಳಕಾಗಿದೆ. ಈ ಪ್ರಾಣವಾಯುವು ಒಳಗಿಂದ ಹೊರಕ್ಕೆ ಬರುವದು. ನಾವು ಹೊರಗಿನಿಂದ ಒಳಕ್ಕೆ ಎಳದುಕೊಳ್ಳುವದನ್ನು ಪ್ರಾಣವಾಯು—ಆಕ್ಸಿಜನ್ [ಆಮ್ಲಜನಕ]—ಎಂಬ ಹೆಸರಿನಿಂದ ಕರೆಯುತ್ತೇವೆ

ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ

ಇನ್ನು ಕೆಲವರು ಆಹಾರದ ಸಂಯಮವನ್ನು ಮಾಡಿ ಪ್ರಾಣಗಳನ್ನು ಪ್ರಾಣದಲ್ಲಿ ಹೋಮಮಾಡುತ್ತಾರೆ. ಯಾರು ಯಜ್ಞಗಳ ಮೂಲಕ ತಮ್ಮ ಪಾಪಗಳನ್ನು ಸವೆದಿದ್ದಾರೊ ಅಂತಹರೆಲ್ಲರೂ ಯಜ್ಞವನ್ನು ತಿಳಿದವರು. ೩೦

ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ

ಹೇ ಕುರುಸತ್ತಮ, ಯಜ್ಞಶೇಷವಾದ ಅಮೃತವನ್ನು ಸೇವಿಸುವ ಜನರು ಸನಾತನವಾದ ಬ್ರಹ್ಮವನ್ನು ಪಡೆಯುತ್ತಾರೆ. ಯಜ್ಞಮಾಡದಿರುವವರಿಗೆ ಈ ಲೋಕವಿಲ್ಲ. ಇನ್ನು ಪರಲೋಕವೆಲ್ಲಿಂದ ಬಂದೀತು? ३१

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ
ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ

ಈ ರೀತಿಯಾಗಿ ವೇದದಲ್ಲಿ ಅನೇಕ ಪ್ರಕಾರದ ಯಜ್ಞಗಳು ವರ್ಣಿಸಲ್ಪಟ್ಟಿವೆ. ಇವೆಲ್ಲವೂ ಕರ್ಮದಿಂದ ಉತ್ಪನ್ನವಾದವುಗಳೆಂದು ತಿಳಿ. ಈ ರೀತಿಯಾಗಿ ಎಲ್ಲವನ್ನೂ ಅರಿತು ನೀನು ಮೋಕ್ಷವನ್ನು ಹೊಂದುವೆ. ३२

ಟಿಪ್ಪಣಿ—ಇಲ್ಲಿ ಕರ್ಮಕ್ಕೆ ವ್ಯಾಪಕ ಅರ್ಥವಿದೆ, ಎಂದರೆ [ಅದು] ಶಾರೀರಿಕ, ಮಾನಸಿಕ ಮತ್ತು ಆತ್ಮಿಕ [ಕರ್ಮಕ್ಕೆ ಅನ್ವಯಿಸುತ್ತದೆ]. ಇಂತಹ ಕರ್ಮವಿಲ್ಲದೆ ಯಜ್ಞವಾಗುವದಿಲ್ಲ. ಯಜ್ಞವಿಲ್ಲದೆ ಮೋಕ್ಷವಾಗುವದಿಲ್ಲ. ಈ ರೀತಿಯಾಗಿ ಅರಿತು ತದನುಸಾರವಾಗಿ ಆಚರಿಸುವದಕ್ಕೆ ಯಜ್ಞಗಳನ್ನು ತಿಳಿದುಕೊಳ್ಳುವದೆಂದು ಹೆಸರು. ತಾತ್ಪರ್ಯವೇನಾಯಿತೆಂದರೆ, ಮನುಷ್ಯನು ತನ್ನ ಶರೀರವನ್ನೂ ಬುದ್ಧಿಯನ್ನೂ ಆತ್ಮವನ್ನೂ ಪ್ರಭುಪ್ರೀತ್ಯರ್ಥವಾಗಿ—ಲೋಕಸೇವೆಗಾಗಿ—ಉಪಯೋಗಿಸದಿದ್ದರೆ ಅವನು ಚೋರನಾಗುತ್ತಾನೆ, ಮತ್ತು ಮೋಕ್ಷಕ್ಕೆ ಯೋಗ್ಯನಾಗಲಾರನು. ಕೇವಲ ಬುದ್ಧಿಶಕ್ತಿಯನ್ನೇ ಉಪಯೋಗಿಸಿ ಶರೀರ ಮತ್ತು ಆತ್ಮ ಇವುಗಳನ್ನು ಕದಿಯುವವನು ಪೂರಾ ಯಾಜ್ಞಿಕನಲ್ಲ; ಈ ಶಕ್ತಿಗಳು ಒಂದುಗೂಡಿದ ಹೊರತು ಅದು ಪರೋಪಕಾರಾರ್ಥವಾಗಿ ಉಪಯೋಗವಾಗಲಾರದು. ಆದುದರಿಂದ ಆತ್ಮಶುದ್ಧಿಯಿಲ್ಲದ ಲೋಕಸೇವೆಯು ಅಸಂಭವವು. ಸೇವಕನು ಶರೀರ, ಬುದ್ಧಿ ಮತ್ತು ಆತ್ಮ—ಇವು ಮೂರನ್ನೂ ಸಮಾನ ರೂಪದಲ್ಲಿ ವಿಕಾಸಗೊಳಿಸುವದು ಅವನ ಕರ್ತವ್ಯ.

ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ

ಹೇ ಪರಂತಪ, ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವು ಉತ್ತಮವಾದುದು; ಏಕೆಂದರೆ, ಎಲೈ ಪಾರ್ಥನೆ, ಎಲ್ಲಾ ಕರ್ಮವೂ ಜ್ಞಾನದಲ್ಲಿಯೇ ಪರಾಕಾಷ್ಠತೆಯನ್ನೈದುತ್ತದೆ. ३३

ಟಿಪ್ಪಣಿ—ಪರೋಪಕಾರ ವೃತ್ತಿಯಿಂದ ಕೊಟ್ಟ ದ್ರವ್ಯವು ಕೂಡ ಜ್ಞಾನ ಪೂರ್ವಕವಾಗಿ ಕೊಟ್ಟುದಾಗಿಲ್ಲದಿದ್ದರೆ ಅದು ಅನೇಕ ವೇಳೆ ಹಾನಿಯನ್ನುಂಟು ಮಾಡುತ್ತದೆ; ಇದು ಯಾರ ಅನುಭವದಲ್ಲಿಲ್ಲ? ಒಳ್ಳೆಯ ವೃತ್ತಿಯಿಂದ ಆಗು ವಂತಹ ಕರ್ಮಗಳೆಲ್ಲಾ ಶೋಭಿಸುವದು ಅವುಗಳೊಡನೆ ಜ್ಞಾನವು ಸೇರಿದಾಗಲೆ. ಆದುದರಿಂದ ಎಲ್ಲಾ ಕರ್ಮದ ಪೂರ್ಣಾಹುತಿಯಿರುವದು ಜ್ಞಾನದಲ್ಲಿಯೆ.

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ

ಇದನ್ನು ನೀನು ತತ್ವವನ್ನು ತಿಳಿದ ಜ್ಞಾನಿಗಳ ಸೇವೆಯನ್ನು ಮಾಡಿ ಮತ್ತು ನಮ್ರತಾಪೂರ್ವಕವಾಗಿಯೂ ವಿವೇಕದಿಂದಲೂ ಪದೇ ಪದೇ ಪ್ರಶ್ನೆಮಾಡಿ ತಿಳಿದುಕೊಳ್ಳಬೇಕು. ಅವರು ನಿನ್ನ ಜಿಜ್ಞಾಸೆಯನ್ನು ತೃಪ್ತಿಪಡಿಸುವರು. ೩೪

ಟಿಪ್ಪಣಿ—ಜ್ಞಾನವನ್ನು ಪಡೆಯುವದಕ್ಕೆ ಮೂರು ಶರತ್ತುಗಳು—ಪ್ರಣಿ ಪಾತ, ಪರಿಪ್ರಶ್ನೆ ಮತ್ತು ಸೇವೆ—ಇವು ಈ ಯುಗದಲ್ಲಿ ಚೆನ್ನಾಗಿ ಧ್ಯಾನದಲ್ಲಿಡಲು ಯೋಗ್ಯವಾಗಿವೆ. ಪ್ರಣಿಪಾತ ಎಂದರೆ ನಮ್ರತೆ, ವಿವೇಕ; ಪರಿಪ್ರಶ್ನೆ ಎಂದರೆ ಪದೇ ಪದೇ ಕೇಳುವದು; ಸೇವೆಯಿಲ್ಲದ ನಮ್ರತೆಯು ಮುಖಸ್ತುತಿಯ ಪಂಕ್ತಿಗೆ ಸೇರಬಲ್ಲದು. ಮತ್ತು ಜ್ಞಾನವು ಅರಸದೆ ದೊರಕುವದಿಲ್ಲ; ಆದುದರಿಂದ ತಿಳಿ ವಳಿಕೆಗೆ ಬರದೆ ಇರುವವರೆಗೂ ಶಿಷ್ಯನು ಗುರುವನ್ನು ನಮ್ರತಾಪೂರ್ವಕವಾಗಿ ಪ್ರಶ್ನೆ ಮಾಡುತ್ತಿರಬೇಕು, ಇದು ಜಿಜ್ಞಾಸೆಯ ಚಿಹ್ನೆಯು. ಇದರಲ್ಲಿ ಶ್ರದ್ಧೆಯ ಆವಶ್ಯಕತೆಯುಂಟು. ಶ್ರದ್ಧೆಯಿಲ್ಲದವನಲ್ಲಿ ಹಾರ್ದಿಕ ನಮ್ರತೆಯಿರುವದಿಲ್ಲ. ಅಂತಹನಿಂದ ಸೇವೆ ತಾನೆ ಹೇಗೆ ಆದೀತು?

ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ

ಈ ಜ್ಞಾನವನ್ನು ಪಡೆದಮೇಲೆ, ಎಲೈ ಪಾಂಡವನೆ, ಮತ್ತೆ ನಿನಗೆ ಇಂತಹ ಮೋಹವುಂಟಾಗುವದಿಲ್ಲ. ಆ ಜ್ಞಾನದ ಮೂಲಕ ನೀನು ಸಕಲ ಭೂತಗಳನ್ನೂ ಆತ್ಮದಲ್ಲಿಯೂ ನನ್ನಲ್ಲಿಯೂ ಕಾಣುವೆ. ೩೫

ಟಿಪ್ಪಣಿ—'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' ಎಂಬುದಕ್ಕೆ ಇದೇ ಅರ್ಥ. ಯಾರಿಗೆ ಆತ್ಮದರ್ಶನವಾಗಿದೆಯೊ ಅವನು ತನ್ನ ಆತ್ಮಕ್ಕೂ ಇತರರ ಆತ್ಮ ಕ್ಕೂ ಭೇದವನ್ನು ಕಾಣುವದಿಲ್ಲ.

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ

ಸಮಸ್ತ ಪಾಪಿಗಳಿಗಿಂತ ನೀನು ಅತ್ಯಂತ ದೊಡ್ಡ ಪಾಪಿಯಾಗಿದ್ದರೂ ಜ್ಞಾನವೆಂಬ ಹಡಗಿನ ಮೂಲಕ ನೀನು ಎಲ್ಲಾ ಪಾಪಗಳನ್ನೂ ದಾಟಿಹೋಗುವೆ. ೩೬

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ

ಎಲೈ ಅರ್ಜುನನೆ, ಉರಿಯುತ್ತಿರುವ ಬೆಂಕಿಯು ಕಟ್ಟಿಗೆಯನ್ನು [ಸುಟ್ಟು] ಬೂದಿಮಾಡಿ ಬಿಡುವಂತೆಯೇ ಜ್ಞಾನವೆಂಬ ಅಗ್ನಿಯು ಕರ್ಮಗಳನ್ನು [ಸುಟ್ಟು] ಬೂದಿಮಾಡಿಬಿಡುತ್ತದೆ. ೩೭

ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ

ಜ್ಞಾನಕ್ಕೆ ಸಮನಾಗಿ ಪವಿತ್ರವಾದುದು ಈ ಜಗತ್ತಿನಲ್ಲಿ ಬೇರೆ ಇನ್ನಾವುದೂ ಇಲ್ಲ. ಯೋಗದಲ್ಲಿ—ಸಮತೆಯಲ್ಲಿ—ಪೂರ್ಣತೆಯನ್ನು ಹೊಂದಿದ ಮನುಷ್ಯನು ಕಾಲಾಂತರದಲ್ಲಿ ತನ್ನಲ್ಲಿ ತಾನೇ ಆ ಜ್ಞಾನವನ್ನು ಪಡೆಯುತ್ತಾನೆ. ೩೮

ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ

ಶ್ರದ್ಧೆಯುಳ್ಳವನೂ ಈಶ್ವರಪರಾಯಣನೂ ಜಿತೇಂದ್ರಿಯನೂ ಆದ ಪುರುಷನು ಜ್ಞಾನವನ್ನು ಪಡೆಯುತ್ತಾನೆ. ಮತ್ತು ಜ್ಞಾನವನ್ನು ಪಡೆದು ಶೀಘ್ರದಲ್ಲಿಯೇ ಪರಮ ಶಾಂತಿಯನ್ನು ಹೊಂದುತ್ತಾನೆ ೩೯

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ

ಅಜ್ಞಾನಿಯೂ ಶ್ರದ್ಧೆಯಿಲ್ಲದವನೂ ಆಗಿದ್ದು ಸಂಶಯವುಳ್ಳವನು ನಾಶವಾಗುತ್ತಾನೆ. ಸಂಶಯವುಳ್ಳವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ; ಅವನಿಗೆ ಎಲ್ಲಿಯೂ ಸುಖವಿಲ್ಲ. ೪೦

ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ

ಯಾರು ಸಮತೆಯೆಂಬ ಯೋಗದ ಮೂಲಕ ಕರ್ಮಗಳನ್ನು, ಎಂದರೆ ಕರ್ಮಫಲವನ್ನು, ತ್ಯಾಗಮಾಡಿ ಜ್ಞಾನದ ಮೂಲಕ ಸಂಶಯವನ್ನು ಛೇದಿಸಿಬಿಟ್ಟಿದ್ದಾನೊ ಅಂತಹ ಆತ್ಮದರ್ಶಿಗೆ, ಎಲೈ ಧನಂಜಯನೆ, ಕರ್ಮಗಳು ಬಂಧನರೂಪವಾಗುವದಿಲ್ಲ. ೪೧

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ

ಆದುದರಿಂದ, ಎಲೈ ಭಾರತನೆ, ಹೃದಯದಲ್ಲಿ ಅಜ್ಞಾನದಿಂದ ಹುಟ್ಟಿದ ಸಂಶಯವನ್ನು ಆತ್ಮಜ್ಞಾನವೆಂಬ ಕತ್ತಿಯಿಂದ ನಾಶಮಾಡಿ ಯೋಗವನ್ನು—ಸಮತೆಯನ್ನು—ಧರಿಸಿ ಎದ್ದು ನಿಂತುಕೊ. ೪೨

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಜ್ಞಾನಕರ್ಮಸಂನ್ಯಾಸಯೋಗವೆಂಬ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



೫

# ಕರ್ಮಸಂನ್ಯಾಸಯೋಗ



ಈ ಅಧ್ಯಾಯದಲ್ಲಿ ಕರ್ಮಯೋಗವಿಲ್ಲದೆ ಕರ್ಮಸಂನ್ಯಾಸವು ಸಾಧ್ಯವೇ ಇಲ್ಲ ಮತ್ತು ವಾಸ್ತವಿಕವಾಗಿ ಎರಡೂ ಒಂದೇ ಎಂಬುದು ತೋರಿಸಲ್ಪಟ್ಟಿದೆ.

ಅರ್ಜುನ ಉವಾಚ —

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ

ಅರ್ಜುನನೆಂದನು—

ಹೇ ಕೃಷ್ಣ, ಕರ್ಮಗಳ ತ್ಯಾಗವನ್ನೂ ಕರ್ಮಗಳ ಯೋಗವನ್ನೂ ನೀನು ಸ್ತುತಿಸುತ್ತೀಯೆ. ಇವೆರಡರಲ್ಲಿ ಯಾವದು ಶ್ರೇಯಸ್ಕರವಾದುದೆಂಬುದನ್ನು ನನಗೆ ಯಥಾರ್ಥವಾಗಿಯೂ ನಿಶ್ಚಯಪೂರ್ವಕವಾಗಿಯೂ ಹೇಳು. ೧

ಶ್ರೀಭಗವಾನುವಾಚ—

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ
ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ

ಶ್ರೀ ಭಗವಂತನು ಹೇಳಿದನು—

ಕರ್ಮಗಳ ತ್ಯಾಗ ಮತ್ತು ಯೋಗ, ಇವೆರಡೂ ಮೋಕ್ಷದಾಯಕವಾಗಿವೆ. ಇವೆರಡರಲ್ಲಿಯೂ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು. ೨

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ

ಯಾವ ಮನುಷ್ಯನು ದ್ವೇಷಿಸುವದಿಲ್ಲವೊ ಮತ್ತು ಇಚ್ಛೆ ಮಾಡುವದಿಲ್ಲವೊ ಅವನನ್ನು ನಿತ್ಯಸಂನ್ಯಾಸಿಯೆಂದು ತಿಳಿಯಬೇಕು. ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾದವನು ಸಹಜವಾಗಿಯೇ ಬಂಧನಗಳಿಂದ ತಪ್ಪಿಸಿಕೊಳ್ಳುತ್ತಾನೆ. ೩

ಟಿಪ್ಪಣಿ— ತಾತ್ಪರ್ಯವೆಂದರೆ, ಈ ಯೋಗದ ಸ್ವತಂತ್ರ [ವಿಶೇಷ, ಮುಖ್ಯ] ಲಕ್ಷಣವು ದ್ವಂದ್ವಾತೀತನಾಗುವದೇ ಹೊರತು ಕರ್ಮದ ತ್ಯಾಗವಲ್ಲ. ಒಬ್ಬ ಮನುಷ್ಯನು ಕರ್ಮ ಮಾಡುತ್ತಿದ್ದರೂ ಸಂನ್ಯಾಸಿಯಾಗಿರಬಲ್ಲನು; ಇನ್ನೊಬ್ಬನು ಕರ್ಮ ಮಾಡದೆ ಇದ್ದರೂ ಮಿಥ್ಯಾಚಾರಿಯಾಗಿರುವದು ಸಾಧ್ಯ. ೩ ನೆಯ ಅಧ್ಯಾಯದ ೬ ನೆಯ ಶ್ಲೋಕವನ್ನು ನೋಡಿ.

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಂ

ಸಾಂಖ್ಯ ಮತ್ತು ಯೋಗ—ಜ್ಞಾನ ಮತ್ತು ಕರ್ಮ—ಇವೆರಡೂ ಭಿನ್ನವಾಗಿವೆಯೆಂದು ಅಜ್ಞಾನಿಗಳು ಹೇಳುತ್ತಾರೆ, ಪಂಡಿತರು ಹೇಳುವದಿಲ್ಲ. ಒಂದರಲ್ಲಿ ಒಳ್ಳೆಯ ರೀತಿಯಲ್ಲಿ ಸ್ಥಿರನಾಗಿರುವವನು ಕೂಡ ಎರಡರ ಫಲವನ್ನೂ ಪಡೆಯುತ್ತಾನೆ. ೪

ಟಿಪ್ಪಣಿ—ಜ್ಞಾನಯೋಗಿಯು ಲೋಕಸಂಗ್ರಹರೂಪಿಯಾದ ಕರ್ಮಯೋಗದ ವಿಶೇಷ ಫಲವನ್ನು ಸಂಕಲ್ಪ ಮಾತ್ರದಿಂದ ಪಡೆಯುತ್ತಾನೆ. ಕರ್ಮಯೋಗಿಯು ತನ್ನ ಅನಾಸಕ್ತಿಯ ಕಾರಣ, ಬಾಹ್ಯಕರ್ಮವನ್ನೆಸಗುತ್ತಿದ್ದರೂ, ಜ್ಞಾನಯೋಗಿಯ ಶಾಂತಿಯನ್ನು ಅನಾಯಾಸವಾಗಿ ಭೋಗಿಸುತ್ತಾನೆ.

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ

ಸಾಂಖ್ಯಮಾರ್ಗಿಗಳು ಹೊಂದುವ ಸ್ಥಾನವನ್ನೇ ಯೋಗಿಯೂ ಪಡೆಯುತ್ತಾನೆ. ಸಾಂಖ್ಯ ಯೋಗಗಳೆರಡನ್ನೂ ಒಂದಾಗಿ ಕಾಣುವವನೇ ಸರಿಯಾಗಿ ನೋಡುವವನು. ೫

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ
ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ

ಎಲೈ ಮಹಾಬಾಹುವೇ, ಕರ್ಮಯೋಗವಿಲ್ಲದೆ ಕರ್ಮತ್ಯಾಗವು ಕಷ್ಟಸಾಧ್ಯವಾದುದು. ಆದರೆ ಸಮತೆಯುಳ್ಳ ಮುನಿಯು ಶೀಘ್ರವಾಗಿ ಮೋಕ್ಷವನ್ನು ಹೊಂದುತ್ತಾನೆ. ೬

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ

ಯಾರು ಯೋಗವನ್ನು ಸಾಧಿಸಿದ್ದಾನೋ, ಯಾರು ಹೃದಯವನ್ನು ವಿಶುದ್ಧವನ್ನಾಗಿ ಮಾಡಿದ್ದಾನೋ ಮತ್ತು ಯಾರು ಸಮಸ್ತ ಭೂತಗಳನ್ನೂ ತನ್ನ ಸಮಾನವೆಂದೇ ತಿಳಿಯುತ್ತಾನೋ, ಇಂತಹ ಮನುಷ್ಯನು ಕರ್ಮಮಾಡುತ್ತಿದ್ದರೂ ಅದರಿಂದ ಅಲಿಪ್ತನಾಗಿರುತ್ತಾನೆ. ೭

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್
ಪಶ್ಯನ್ ಶೃಣ್ವನ್ ಸ್ಪೃಶಂಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್
ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್

ನೋಡುವಾಗ, ಕೇಳುವಾಗ, ಸ್ಪರ್ಶಿಸುವಾಗ, ಮೂಸಿ ನೋಡುವಾಗ, ತಿನ್ನುವಾಗ, ಚಲಿಸುವಾಗ, ನಿದ್ದೆಗೈಯುವಾಗ, ಉಸಿರಾಡುವಾಗ, ಮಾತಾಡುವಾಗ, ಬಿಡುವಾಗ, ತೆಗೆದುಕೊಳ್ಳುವಾಗ, ಕಣ್ಣು ಬಿಡುವಾಗ, ಕಣ್ಣು ಮುಚ್ಚುವಾಗ, ಕೇವಲ ಇಂದ್ರಿಯಗಳೇ ತಮ್ಮ ಕೆಲಸವನ್ನು ಮಾಡುತ್ತವೆ ಎಂಬ ಭಾವನೆಯನ್ನಿಟ್ಟು ತತ್ವಜ್ಞನಾದ ಯೋಗಿಯು ನಾನು "ಏನನ್ನೂ ಮಾಡುವದೇ ಇಲ್ಲ" ಎಂದು ತಿಳಿದುಕೊಳ್ಳಬೇಕು. ೮-೯

ಟಿಪ್ಪಣಿ—ಅಭಿಮಾನವಿರುವವರೆಗೆ ಇಂತಹ ಅಲಿಪ್ತಸ್ಥಿತಿಯು ಲಭಿಸುವದಿಲ್ಲ. ಆದುದರಿಂದ ವಿಷಯಾಸಕ್ತನಾದ ಮನುಷ್ಯನು "ವಿಷಯಗಳನ್ನು ನಾನು ಭೋಗಿಸುವದಿಲ್ಲ; ಇಂದ್ರಿಯಗಳು ತಮ್ಮ ಕೆಲಸವನ್ನು ಮಾಡುತ್ತವೆ" ಎಂದು

ಹೇಳಿ ತಪ್ಪಿಸಿಕೊಳ್ಳಲಾರನು. ಇಂತಹ ಅನರ್ಥವನ್ನು [ತಪ್ಪು ಅರ್ಥವನ್ನು] ಮಾಡು ವವನಿಗೆ ಗೀತೆಯು ತಿಳಿದಿಲ್ಲ, ಮತ್ತು ಅವನಿಗೆ ಧರ್ಮವೇ ಗೊತ್ತಿಲ್ಲ. ಈ ವಿಷಯ ವನ್ನು ಕೆಳಗಿನ ಶ್ಲೋಕವು ಸ್ಪಷ್ಟಪಡಿಸುತ್ತದೆ.

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ

ಕರ್ಮವನ್ನು ಬ್ರಹ್ಮಾರ್ಪಣ ಮಾಡಿ ಆಸಕ್ತಿಯನ್ನು ಬಿಟ್ಟು ಆಚರಿಸುವ ಮನುಷ್ಯನು ನೀರಿನಲ್ಲಿರುವ ಕಮಲವು ಅಲಿಪ್ತವಾಗಿರು ವಂತೆಯೇ ಪಾಪದಿಂದ ಅಲಿಪ್ತನಾಗಿರುತ್ತಾನೆ. ೧೦

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ

ಶರೀರದಿಂದ, ಮನಸ್ಸಿನಿಂದ, ಬುದ್ಧಿಯಿಂದ ಅಥವಾ ಕೇವಲ ಇಂದ್ರಿಯಗಳಿಂದ ಯೋಗಿಗಳು, ಆಸಕ್ತಿಯಿಲ್ಲದವರಾಗಿ, ಆತ್ಮಶುದ್ಧಿ ಗಾಗಿ ಕರ್ಮವೆಸಗುತ್ತಾರೆ. ೧೧

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ

ಸಮತೆಯುಳ್ಳವನು ಕರ್ಮಫಲವನ್ನು ತ್ಯಜಿಸಿ ಪರಮ ಶಾಂತಿ ಯನ್ನು ಪಡೆಯುತ್ತಾನೆ. ಅಸ್ಥಿರವಾದ ಚಿತ್ತವುಳ್ಳವನು ಆಸೆಯುಳ್ಳ ವನಾಗಿ ಫಲದಲ್ಲಿ ಸಿಕ್ಕಿಬಿದ್ದು ಬಂಧನದಲ್ಲಿರುತ್ತಾನೆ. ೧೨

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್

ಸಂಯಮಿಯಾದ ಪುರುಷನು ಮನಃಪೂರ್ವಕವಾಗಿ ತ್ಯಾಗ ಮಾಡಿ ನವದ್ವಾರಯುಕ್ತನಗರರೂಪಿಯಾದ ಶರೀರದಲ್ಲಿರುತ್ತಿದ್ದರೂ ಏನನ್ನೂ ಮಾಡದೆ, ಮಾಡಿಸದೆ, ಸುಖವಾಗಿರುತ್ತಾನೆ. ೧೩

ಟಿಪ್ಪಣಿ—ಎರಡು ಮೂಗಿನ ಸೊಳ್ಳೆಗಳೂ, ಎರಡು ಕಿವಿಗಳೂ ಎರಡು ಕಣ್ಣುಗಳೂ ಜಲಮಲತ್ಯಾಗದ ಎರಡು ಸ್ಥಳಗಳೂ ಮತ್ತು ಬಾಯಿ, ಇವು ಶರೀರದ

ಒಂಬತ್ತು ಮುಖ್ಯದ್ವಾರಗಳು ಚರ್ಮದ ಅಸಂಖ್ಯ ಛಿದ್ರಗಳೆಲ್ಲವೂ ಬಾಗಿಲುಗಳೇ. ಈ ಎಲ್ಲ ಬಾಗಿಲುಗಳ ಕಾವಲುಗಾರನು ಇವುಗಳಲ್ಲಿ ಬಂದು ಹೋಗುವ ಅಧಿಕಾರವುಳ್ಳವುಗಳನ್ನು ಮಾತ್ರ ಓಡಾಡುವದಕ್ಕೆ ಬಿಡುತ್ತಾ ತನ್ನ ಧರ್ಮವನ್ನು ಪಾಲಿಸುತ್ತಿದ್ದರೆ ಆ ವಿಷಯವಾಗಿ ಹೀಗೆ ಹೇಳಬಹುದು :—ಈ ಹೋಗೋಣ ಬರೋಣಗಳು ನಡೆಯುತ್ತಿದ್ದರೂ ಅವನು ಅದರ ಭಾಗಿಯಲ್ಲ ಕೇವಲ ಸಾಕ್ಷಿಯಾಗಿದ್ದಾನೆ; ಇದರಿಂದ ಅವನು ಮಾಡುವದೂ ಇಲ್ಲ ಮಾಡಿಸುವದೂ ಇಲ್ಲ.

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ

ಜಗತ್ತಿನ ಪ್ರಭುವು ಕರ್ತೃತ್ವವನ್ನು ರಚಿಸುವದಿಲ್ಲ, ಕರ್ಮ ಮತ್ತು ಫಲ ಇವುಗಳ ಸಂಯೋಗವನ್ನು ಸಾಧಿಸುವದೂ ಇಲ್ಲ. ಪ್ರಕೃತಿಯೇ ಎಲ್ಲವನ್ನೂ ಮಾಡುತ್ತದೆ. ೧೪

ಟಿಪ್ಪಣಿ—ಈಶ್ವರನು ಕರ್ತನಲ್ಲ ಕರ್ಮದ ನಿಯಮವು ಅಚಲವೂ ಅನಿವಾರ್ಯವೂ ಆದುದು ಮತ್ತು ಯಾರು ಯಾವ ರೀತಿಯಲ್ಲಿ ಮಾಡುತ್ತಾನೋ ಅವನು ಅದೇ ರೀತಿಯಲ್ಲಿ ಉಣಲೇಬೇಕಾಗುತ್ತದೆ. ಇದರಲ್ಲಿಯೇ ಈಶ್ವರನ ಮಹಾದಯೆಯಿರುವದು, ಅವನ ನ್ಯಾಯವಿರುವದು ಶುದ್ಧ ನ್ಯಾಯದಲ್ಲಿ ಶುದ್ಧ ದಯೆಯಿದೆ. ನ್ಯಾಯದ ವಿರೋಧಿಯು ದಯೆಯಲ್ಲ. ಅದು ಕ್ರೂರತೆ. ಆದರೆ ಮನುಷ್ಯನು ತ್ರಿಕಾಲದರ್ಶಿಯಲ್ಲ. ಇದರಿಂದ ಅವನ ಪಾಲಿಗಾದರೋ ದಯೆಯೇ—ಕ್ಷಮೆಯೇ—ನ್ಯಾಯವೆನಿಸಿದ ಅವನು ಸ್ವಯಂ ನಿರಂತರ ನ್ಯಾಯಪಾತ್ರನಾಗಿ ಕ್ಷಮೆಯ ಯಾಚಕನಾಗಿದ್ದಾನೆ ಅವನು ಎರಡನೆಯವನ ನ್ಯಾಯವನ್ನು ಕ್ಷಮೆಯಿಂದಲೇ ನಿರ್ಣಯಿಸಬಲ್ಲನು. ಕ್ಷಮಾಗುಣವನ್ನು ವಿಕಾಸಗೊಳಿಸಿದ ಮೇಲೆ ಕಡೆಯಲ್ಲಿ ಅಕರ್ತನು [ಕರ್ತನಲ್ಲದವನು]--ಯೋಗಿಯು—ಸಮತಾಶೀಲನು—ಕರ್ಮದಲ್ಲಿ ಕುಶಲನಾಗಬಲ್ಲನು.

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ

ಈಶ್ವರನು ಯಾರ ಪಾಪದ ಅಥವಾ ಪುಣ್ಯದ ದಾಯಿತ್ವವನ್ನೂ ತೆಗೆದುಕೊಳ್ಳುವದಿಲ್ಲ ಅಜ್ಞಾನದ ಮೂಲಕ ಜ್ಞಾನವು ಮುಸುಕಾಗಿ ಹೋಗುತ್ತದೆ. ಮತ್ತು ಇದರಿಂದ ಜನರು ಮೋಹದಲ್ಲಿ ಸಿಕ್ಕಿಬೀಳುತ್ತಾರೆ. ೧೫

ಟಿಪ್ಪಣಿ—ಅಜ್ಞಾನದಿಂದ, ನಾನು ಮಾಡುತ್ತೇನೆ ಎಂಬ ವೃತ್ತಿಯಿಂದ, ಮನುಷ್ಯನು ಕರ್ಮ ಬಂಧನವನ್ನು ಕಟ್ಟಿಕೊಳ್ಳುತ್ತಾನೆ. ಆದರೂ ಅವನು ಒಳ್ಳೆಯ ಮತ್ತು ಕೆಟ್ಟ ಫಲವನ್ನು ಈಶ್ವರನಿಗೆ ಆರೋಪಿಸುತ್ತಾನೆ. ಇದು ಮೋಹ ಜಾಲ.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ
ತೇಷಾಮಾದಿತ್ಯವಜ್ಞ್ಜಾನಂ ಪ್ರಕಾಶಯತಿ ತತ್ಪರಂ

ಆದರೆ ಯಾರ ಅಜ್ಞಾನವು ಆತ್ಮಜ್ಞಾನದ ಮೂಲಕ ನಾಶವಾಗಿದೆಯೊ ಅವರಿಗೆ ಆ ಸೂರ್ಯನಿಗೆ ಸಮನಾಗಿ ಪ್ರಕಾಶಮಾನವಾದ ಜ್ಞಾನವು ಪರಮತತ್ವದ ದರ್ಶನವನ್ನು ಮಾಡಿಸುತ್ತದೆ. ೧೬

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ

ಜ್ಞಾನದ ಮೂಲಕ ಯಾರ ಪಾಪವು ತೊಡೆದುಹೋಗಿದೆಯೊ ಅವರೂ ಈಶ್ವರನ ಧ್ಯಾನವನ್ನು ಧರಿಸಿ ತನ್ಮಯರಾಗಿ ಅದರಲ್ಲಿ ಸ್ಥಿರವಾಗಿರುವವರೂ ಮತ್ತು ಅದನ್ನೇ ಸರ್ವಸ್ವವೆಂದೆಣಿಸುವ ಜನರೂ ಮೋಕ್ಷವನ್ನು ಪಡೆಯುತ್ತಾರೆ. ೧೭

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ

ವಿದ್ವಾಂಸನೂ ವಿನಯಿಯೂ ಆದ ಬ್ರಾಹ್ಮಣನಲ್ಲಿಯೂ, ಹಸುವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ನಾಯಿಯನ್ನು ತಿನ್ನುವವನಲ್ಲಿಯೂ ಜ್ಞಾನಿಗಳು ಸಮದೃಷ್ಟಿಯಿಡುತ್ತಾರೆ. ೧೮

ಟಿಪ್ಪಣಿ—ತಾತ್ಪರ್ಯ: ಎಲ್ಲರಿಗೂ ಅವರವರ ಆವಶ್ಯಕತೆಗನುಸಾರವಾಗಿ ಸೇವೆ ಮಾಡುತ್ತಾರೆ. ಬ್ರಾಹ್ಮಣನನ್ನೂ ಚಂಡಾಲನನ್ನೂ ಕುರಿತು ಸಮಭಾವವಿಡುವದರ ಅರ್ಥವೇನೆಂದರೆ, ಬ್ರಾಹ್ಮಣನನ್ನು ಸರ್ಪವು ಕಡಿದರೆ ಅವನ ಗಾಯವನ್ನು ಜ್ಞಾನಿಯು ಪ್ರೇಮಭಾವದಿಂದ ಹೀರಿ ಅವನನ್ನು ವಿಷಮುಕ್ತನಾಗಿ ಮಾಡಲು ಪ್ರಯತ್ನಿಸುವಂತೆಯೇ ಚಂಡಾಲನ ವಿಷಯದಲ್ಲಿಯೂ ಅಂತಹದೇ ಸ್ಥಿತಿಯಲ್ಲಿ ವ್ಯವಹರಿಸುತ್ತಾನೆ.

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ

ಯಾರ ಮನಸ್ಸು ಸಮತೆಯಲ್ಲಿ ಸ್ಥಿರವಾಗಿಬಿಟ್ಟಿದೆಯೊ ಅವರು ಈ ದೇಹದಿಂದಲೇ ಪ್ರಪಂಚವನ್ನು ಗೆದ್ದಿದ್ದಾರೆ. ಬ್ರಹ್ಮವು ನಿಷ್ಕಳಂಕನಾದುದು ಮತ್ತು ಸಮಭಾವವುಳ್ಳದು. ಆದುದರಿಂದ ಅವರು ಬ್ರಹ್ಮದಲ್ಲಿಯೇ ಸ್ಥಿರರಾಗಿದ್ದಾರೆ. ೧೯

ಟಿಪ್ಪಣಿ—ಮನುಷ್ಯನು ಯಾವ ರೀತಿಯಲ್ಲಿ ಮತ್ತು ಯಾವದನ್ನು ಕುರಿತು ಚಿಂತಿಸುತ್ತಾನೊ ಹಾಗೆಯೇ ಆಗುತ್ತಾನೆ. ಆದುದರಿಂದ ಸಮತೆಯ ಚಿಂತನೆಯನ್ನು ಮಾಡಿ, ದೋಷರಹಿತನಾಗಿ, ಸಮತೆಯ ಮೂರ್ತಿರೂಪವಾದ ನಿರ್ದೋಷ ಬ್ರಹ್ಮವನ್ನು ಹೊಂದುತ್ತಾನೆ.

ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ
ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ

ಯಾರ ಬುದ್ಧಿಯು ಸ್ಥಿರವಾಗಿದೆಯೊ, ಯಾರ ಮೋಹವು ನಾಶವಾಗಿಹೋಗಿದೆಯೊ, ಯಾರು ಬ್ರಹ್ಮವನ್ನರಿತಿರುವನೊ ಮತ್ತು ಯಾರು ಬ್ರಹ್ಮಪರಾಯಣನಾಗಿರುತ್ತಾನೊ ಅವನು ಪ್ರಿಯವನ್ನು ಪಡೆದು ಸುಖವೆಂದೆಣಿಸುವದಿಲ್ಲ, ಅಪ್ರಿಯವನ್ನು ಪಡೆದು ದುಃಖವೆಂದೆಣಿಸುವದಿಲ್ಲ. ೨೦

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ ಸುಖಂ
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ

ಬಾಹ್ಯವಿಷಯಗಳಲ್ಲಿ ಆಸಕ್ತಿಯಿಲ್ಲದಂತಹ ಮನುಷ್ಯನು ತನ್ನೊಳಗೆ ಯಾವ ಆನಂದವನ್ನು ಭೋಗಿಸುತ್ತಾನೊ ಆ ಅಕ್ಷಯ ಆನಂದವನ್ನು ಮೇಲೆ ಹೇಳಿದ ಬ್ರಹ್ಮಪರಾಯಣನಾದ ಪುರುಷನು ಅನುಭವಿಸುತ್ತಾನೆ. ೨೧

ಟಿಪ್ಪಣಿ—ಅಂತರ್ಮುಖನಾಗಿರುವವನು ಮಾತ್ರ ಈಶ್ವರಸಾಕ್ಷಾತ್ಕಾರ ಮಾಡಬಲ್ಲನು, ಮತ್ತು ಅವನು ಮಾತ್ರ ಪರಮ ಆನಂದವನ್ನು ಪಡೆಯುತ್ತಾನೆ.

ವಿಷಯಗಳಿಂದ ನಿವೃತ್ತನಾಗಿದ್ದು ಕರ್ಮಗೈವುದು ಮತ್ತು ಬ್ರಹ್ಮಸಮಾಧಿಯಲ್ಲಿ ಶಮಿಸುವದು—ಇವೆರಡೂ ಭಿನ್ನವಸ್ತುಗಳಲ್ಲ ಅವು ಒಂದೇ ವಸ್ತುವನ್ನು ನೋಡುವ ಎರಡು ದೃಷ್ಟಿಗಳಾಗಿವೆ—ಒಂದೇ ನಾಣ್ಯದ ಎರಡು ಮೈಗಳಾಗಿವೆ.

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ

ವಿಷಯಜನಿತವಾದ ಭೋಗಗಳು ಅವಶ್ಯವಾಗಿಯೂ ದುಃಖ ಕಾರಣಗಳು. ಹೇ ಕೌಂತೇಯ, ಅವು ಮೊದಲುಕೊನೆಗಳನ್ನುಳ್ಳವು. ಧೀಮಂತನಾದ ಮನುಷ್ಯನು ಅವುಗಳಲ್ಲಿ ರತನಾಗಿರುವದಿಲ್ಲ. ೨೨

ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ

ದೇಹಾಂತಕ್ಕೆ ಮುಂಚೆ ಯಾವ ಮನುಷ್ಯನು ಈ ದೇಹದಿಂದಲೇ ಕಾಮಕ್ರೋಧಗಳ ಆವೇಗವನ್ನು ಸಹಿಸುವ ಶಕ್ತಿಯನ್ನು ಪಡೆಯುತ್ತಾನೊ ಅವನು ಸಮತೆಯನ್ನು ಹೊಂದಿದ್ದಾನೆ, ಅವನು ಸುಖಿಯು. ೨೩

**ಟಿಪ್ಪಣಿ**—ಮೃತಶರೀರಕ್ಕೆ ಇಚ್ಛೆಯಾಗಲಿ ದ್ವೇಷವಾಗಲಿ ಸುಖದುಃಖವಾಗಲಿ ಉಂಟಾಗದಂತೆಯೇ ಯಾವನು ಜೀವಂತನಾಗಿದ್ದರೂ ಮೃತದೇಹಸಮಾನನಾಗಿ—ಜಡಭರತನ ರೀತಿಯಲ್ಲಿ—ದೇಹಾತೀತನಾಗಿರಬಲ್ಲನೊ ಅವನು ಈ ಲೋಕದಲ್ಲಿ ವಿಜಯಿಯು, ಮತ್ತು ಅವನು ವಾಸ್ತವಿಕ ಸುಖವನ್ನು ಬಲ್ಲನು.

ಯೋಂತಃಸುಖೋಂತರಾರಾಮಸ್ತಥಾಂತರ್ಜ್ಯೋತಿರೇವ ಯಃ
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಧಿಗಚ್ಛತಿ

ಯಾರಿಗೆ ಒಳಗಿನ ಆನಂದವುಂಟೊ, ಯಾರ ಹೃದಯದಲ್ಲಿ ಶಾಂತಿಯುಂಟೊ, ಯಾರಿಗೆ ಅವಶ್ಯವಾಗಿ ಅಂತರ್ಜ್ಞಾನವುಂಟಾಗಿದೆಯೊ, ಆ ಬ್ರಹ್ಮರೂಪವನ್ನು ಹೊಂದಿದ ಯೋಗಿಯು ಬ್ರಹ್ಮನಿರ್ವಾಣವನ್ನೈದುತ್ತಾನೆ. ೨೪

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ

ಯಾರ ಪಾಪಗಳು ನಾಶವಾಗಿಬಿಟ್ಟಿವೆಯೊ, ಯಾರ ಸಂಶಯಗಳು ಶಾಂತವಾಗಿಹೋಗಿವೆಯೊ, ಯಾರು ಮನಸ್ಸಿನ ಮೇಲೆ ಅಧಿಕಾರವನ್ನು ಹೊಡಿಬಿಟ್ಟಿದ್ದಾರೊ, ಯಾರು ಎಲ್ಲಾ ಪ್ರಾಣಿಗಳ ಹಿತದಲ್ಲಿಯೇ ತೊಡಗಿರುತ್ತಾರೊ, ಅಂತಹ ಋಷಿಗಳು ಬ್ರಹ್ಮನಿರ್ವಾಣವನ್ನೈದುತ್ತಾರೆ. ೨೫

ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಂ
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಂ

ಯಾರು ತಮ್ಮನ್ನು ಅರಿತುಕೊಂಡಿದ್ದಾರೊ, ಯಾರು ಕಾಮಕ್ರೋಧಗಳನ್ನು ಗೆದ್ದಿದ್ದಾರೊ, ಮತ್ತು ಯಾರು ಮನಸ್ಸನ್ನು ವಶಮಾಡಿಕೊಂಡಿದ್ದಾರೊ ಅಂತಹ ಯತಿಗಳ ಪಾಲಿಗೆ ಎಲ್ಲೆಡೆಯಿರುವದೂ ಬ್ರಹ್ಮನಿರ್ವಾಣವೇ. ೨೬

ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ
ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ

ಬಾಹ್ಯವಿಷಯಭೋಗಗಳನ್ನು ಬಹಿಷ್ಕರಿಸಿ, ದೃಷ್ಟಿಯನ್ನು ಹುಬ್ಬುಗಳ ನಡುವೆ ಸ್ಥಿರಗೊಳಿಸಿ, ಮೂಗಿನ ಮೂಲಕ ಹೋಗಿಬರುವ ಪ್ರಾಣ ಮತ್ತು ಅಪಾನ ವಾಯುವಿನ ಗತಿಯನ್ನು ಒಂದೇ ಸಮನಾಗಿಟ್ಟು, ಇಂದ್ರಿಯ, ಮನಸ್ಸು ಮತ್ತು ಬುದ್ಧಿ, ಇವುಗಳನ್ನು ವಶಮಾಡಿಕೊಂಡು, ಇಚ್ಛೆ, ಭಯ, ಕ್ರೋಧ, ಇವುಗಳಿಲ್ಲದವನಾಗಿ ಯಾವ ಮುನಿಯು ಮೋಕ್ಷದಲ್ಲಿ ಪರಾಯಣನಾಗಿರುತ್ತಾನೊ ಅವನು ಸದಾ ಮುಕ್ತನೇ ಸರಿ. ೨೭, ೨೮

**ಟಿಪ್ಪಣಿ**—ಪ್ರಾಣವಾಯುವು ಒಳಗಿನಿಂದ ಹೊರಕ್ಕೆ ಬರುವ, ಅಪಾನವು ಹೊರಗಿನಿಂದ ಒಳಕ್ಕೆ ಹೋಗುವ, ವಾಯುವಾಗಿದೆ. ಈ ಶ್ಲೋಕಗಳಲ್ಲಿ ಪ್ರಾಣಾ

ಯಾಮ ಮುಂತಾದ ಯೌಗಿಕ ಕ್ರಿಯೆಗಳ ಸಮರ್ಥನವಿದೆ. ಪ್ರಾಣಾಯಾಮಾದಿಗಳಾದರೂ ಬಾಹ್ಯಕ್ರಿಯೆಗಳು. ಅವುಗಳ ಪ್ರಭಾವವು ಶರೀರವನ್ನು ಸ್ವಸ್ಥವಾಗಿಡುವದು ಮತ್ತು ಪರಮಾತ್ಮನು ವಾಸಿಸಲು ಯೋಗ್ಯವಾದ ಮಂದಿರವಾಗಿ ಮಾಡುವದು, ಇಲ್ಲಿಯುವರೆಗೆ ಮಾತ್ರ ಪರಿಮಿತಿಯುಳ್ಳದಾಗಿದೆ. ಭೋಗಿಗೆ ಸಾಧಾರಣ ವ್ಯಾಯಾಮ ಮೊದಲಾದವುಗಳಿಂದೊದಗುವ ಕೆಲಸವೇ ಯೋಗಿಗೆ ಪ್ರಾಣಾಯಾಮಾದಿಗಳಿಂದ ಲಭಿಸುವುದು. ಭೋಗಿಯ ವ್ಯಾಯಾಮಾದಿಗಳು ಅವನ ಇಂದ್ರಿಯಗಳಿಗೆ ಉತ್ತೇಜನ ಕೊಡುವದರಲ್ಲಿ ಸಹಾಯ ಮಾಡುತ್ತವೆ. ಪ್ರಾಣಾಯಾಮ ಮುಂತಾದವು ಯೋಗಿಯ ಶರೀರವನ್ನು ರೋಗವಿಲ್ಲದುದಾಗಿಯೂ ಕಠಿಣವಾಗಿಯೂ ಮಾಡಿದರೂ ಇಂದ್ರಿಯಗಳನ್ನು ಶಾಂತವಾಗಿಡುವದರಲ್ಲಿ ನೆರವೀಯುತ್ತವೆ. ಈಗಿನ ಕಾಲದಲ್ಲಿ ಪ್ರಾಣಾಯಾಮಾದಿಗಳ ವಿಧಿಯನ್ನು ಅತ್ಯಂತ ಸ್ವಲ್ಪ ಜನರು ಬಲ್ಲರು. ಮತ್ತು ಅವರಲ್ಲಿಯೂ ಬಹು ಕಡಿಮೆ ಜನರು ಅದನ್ನು ಸದುಪಯೋಗಪಡಿಸುತ್ತಾರೆ. ಯಾರು ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ, ಇವುಗಳ ಮೇಲೆ ಕನಿಷ್ಟಪಕ್ಷ ಪ್ರಾಥಮಿಕ ವಿಜಯವನ್ನು ಹೊಂದಿರುವನೊ, ಯಾರಿಗೆ ಮೋಕ್ಷದ ಉತ್ಕಟ ಅಭಿಲಾಷೆಯುಂಟೊ, ಯಾರು ರಾಗದ್ವೇಷಾದಿಗಳನ್ನು ಗೆದ್ದು ಭಯವನ್ನು ಬಿಟ್ಟಿರುವನೊ, ಅವನಿಗೆ ಪ್ರಾಣಾಯಾಮಾದಿಗಳು ಉಪಯೋಗಕರವಾಗಿಯೂ ಸಹಾಯಕವಾಗಿಯೂ ಇರುತ್ತವೆ. ಅಂತಃಶುಚಿಯಿಲ್ಲದ ಪ್ರಾಣಾಯಾಮಾದಿಗಳು ಬಂಧನಮೊಂದು ಸಾಧನವಾಗಿ ಮನುಷ್ಯನನ್ನು ಮೋಹಕೂಪದಲ್ಲಿ ಬಹು ಕೆಳಕ್ಕೆ ಎಳೆಯಬಲ್ಲವು—ಹೀಗೆ ಅನೇಕರಿಗೆ ಅನುಭವವಿದೆ. ಇದರಿಂದ ಯೋಗೀಂದ್ರ ಪತಂಜಲಿಗಳು ಯಮನಿಯಮಕ್ಕೆ ಪ್ರಥಮಸ್ಥಾನವಿತ್ತು ಆದರ ಸಾಧಕನಿಗೆ ಮಾತ್ರ ಮೋಕ್ಷಮಾರ್ಗದಲ್ಲಿ ಪ್ರಾಣಾಯಾಮಾದಿಗಳು ಸಹಾಯಕಗಳೆಂದು ಭಾವಿಸಿದ್ದಾರೆ.

ಯಮಗಳು ಐದು: ಅಹಿಂಸೆ, ಸತ್ಯ ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ. ನಿಯಮಗಳು ಐದು: ಶೌಚ, ಸಂತೋಷ, ತಪ, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನ.

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ

ಯಜ್ಞ ಮತ್ತು ತಪಸ್ಸು, ಇವುಗಳನ್ನು ಭೋಗಿಸುವವನು, ಇಡೀ ಲೋಕದ ಮಹೇಶ್ವರನು, ಮತ್ತು ಸರ್ವಭೂತಗಳಿಗೆ ಹಿತವೆಸಗುವವನು ನಾನೆಂದು ತಿಳಿದುಕೊಂಡು [ಮೇಲೆ] ಹೇಳಿದಂತಹ ಮುನಿಯು ಶಾಂತಿಯನ್ನು ಪಡೆಯುತ್ತಾನೆ. ೨೯

ಟಿಪ್ಪಣಿ — ಈ ಅಧ್ಯಾಯದ ಹದಿನಾಲ್ಕನೆಯ, ಹದಿನೈದನೆಯ ಮತ್ತು ಅಂತಹವೇ ಆದ ಇತರ ಶ್ಲೋಕಗಳಿಗೆ ಈ ಶ್ಲೋಕವು ವಿರುದ್ಧವಾಗಿದೆಯೆಂದು ಯಾರೂ ತಿಳಿಯದಿರಲಿ. ಈಶ್ವರನು ಸರ್ವಶಕ್ತನಾಗಿದ್ದರೂ ಅವನು ಕರ್ತೃ-ಅಕರ್ತೃ, ವೆನ್ನಿ ಭೋಕ್ತೃ-ಅಭೋಕ್ತೃವೆನ್ನಿ, ಆಗಿದ್ದಾನೆ ಮತ್ತು ಆಗಿಲ್ಲ. ಅವನನ್ನು ವರ್ಣಿಸ ಲಾಗುವದಿಲ್ಲ; ಅವನು ಮನುಷ್ಯನ ಭಾಷೆಗೆ ಸಿಕ್ಕದವನಾಗಿದ್ದಾನೆ. ಆದುದ ರಿಂದ ಅವನಲ್ಲಿ ಪರಸ್ಪರವಿರುದ್ಧ ಗುಣಗಳನ್ನೂ ಶಕ್ತಿಗಳನ್ನೂ ಆರೋಪಿಸಿಯಾದರೂ ಮನುಷ್ಯನು ಅವನ ದರ್ಶನದ ಆಸೆಯನ್ನಿಟ್ಟುಕೊಂಡಿರುತ್ತಾನೆ.

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಕರ್ಮಸಂ ನ್ಯಾಸಯೋಗವೆಂಬ ಐದನೆಯ ಅಧ್ಯಾಯವು ಸಮಾಪ್ತವು.



೬

# ಧ್ಯಾನಯೋಗ



ಈ ಅಧ್ಯಾಯದಲ್ಲಿ ಯೋಗವನ್ನು ಸಾಧಿಸುವದಕ್ಕೆ—ಸಮತೆಯನ್ನು ಸಂಪಾದಿಸುವದಕ್ಕೆ—ಹಲವು ಸಾಧನಗಳು ಸೂಚಿಸಲ್ಪಟ್ಟಿವೆ.

ಶ್ರೀ ಭಗವಾನುವಾಚ—

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ
ಸ ಸನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ

ಶ್ರೀ ಭಗವಂತನು ಹೇಳಿದನು—

ಕರ್ಮಫಲವನ್ನಾಶ್ರಯಿಸದೆ ವಿಹಿತಕರ್ಮವನ್ನು ಮಾಡುವ ಮನುಷ್ಯನು ಸಂನ್ಯಾಸಿಯು, ಅವನು ಯೋಗಿಯು; ಅಗ್ನಿಯನ್ನೂ ಕೇವಲ ಕ್ರಿಯೆಯನ್ನೂ ತ್ಯಜಿಸಿ ಕುಳಿತುಕೊಂಡಿರುವವನಲ್ಲ. ೧

**ಟಿಪ್ಪಣಿ**—ಅಗ್ನಿ ಎಂದರೆ ಸರ್ವಸಾಧನಗಳು. ಅಗ್ನಿಯ ಮೂಲಕ ಹೋಮವಾಗುತ್ತಿದ್ದ ಕಾಲದಲ್ಲಿ ಅಗ್ನಿಯ ಆವಶ್ಯಕತೆಯಿದ್ದಿತು. ಈ ಯುಗದಲ್ಲಿ ಚರಖವು ಸೇವೆಯ ಸಾಧನವೆಂದೆಣಿಸಿದರೆ ಅದನ್ನು ತ್ಯಜಿಸುವದರಿಂದ ಸಂನ್ಯಾಸಿಯಾಗಲಾರನು.

ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ

ಎಲೈ ಪಾಂಡವನೆ, ಯಾವದನ್ನು ಸಂನ್ಯಾಸವೆಂದು ಕರೆಯುತ್ತಾರೊ ಅದನ್ನು ನೀನು ಯೋಗವೆಂದು ತಿಳಿ. ಮನಸ್ಸಿನ ಸಂಕಲ್ಪಗಳನ್ನು ತ್ಯಜಿಸಿಲ್ಲದವನು ಎಂದಿಗೂ ಯೋಗಿಯಾಗಲಾರನು. ೨

ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ

ಯೋಗವನ್ನು ಸಾಧಿಸುವವನಿಗೆ ಕರ್ಮವು ಸಾಧನವು; ಅದನ್ನು ಸಾಧಿಸಿರುವವನಿಗೆ ಶಾಂತಿಯು ಸಾಧನವು. ೩

ಟಿಪ್ಪಣಿ—ಯಾರಿಗೆ ಆತ್ಮಶುದ್ಧಿಯುಂಟಾಗಿದೆಯೊ, ಯಾರು ಸಮತಾ ಸಿದ್ಧಿ ಹೊಂದಿದ್ದಾನೊ, ಅವನಿಗೆ ಆತ್ಮದರ್ಶನವು ಸಹಜವಾಗಿದೆ. ಯೋಗಾರೂಢನಿಗೆ ಲೋಕಸಂಗ್ರಹಕ್ಕಾಗಿ ಕೂಡ ಕರ್ಮ ಮಾಡುವ ಆವಶ್ಯಕತೆಯಿಲ್ಲವೆಂದು ಇದರ ಅರ್ಥವಲ್ಲ. ಲೋಕಸಂಗ್ರಹವಿಲ್ಲದೆ ಅವನು ಜೀವಿಸುವದೇ ಸಾಧ್ಯವಲ್ಲ. ತಾತ್ಪರ್ಯ: ಸೇವಾಕರ್ಮ ಮಾಡುವದೂ ಅವನಿಗೆ ಸಹಜವಾಗುತ್ತದೆ. ಅವನು [ಹೊರಗಿನ] ತೋರಿಕೆಗಾಗಿ ಏನನ್ನೂ ಮಾಡುವದಿಲ್ಲ. ಅ. ೩, ಶ್ಲೋ. ೪ನ್ನು ಅ. ೫, ಶ್ಲೋ ೨ರೊಡನೆ ಜೋಡಿಸಿರಿ.

ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ
ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ

ಮನುಷ್ಯನು ಇಂದ್ರಿಯಗಳ ವಿಷಯಗಳಲ್ಲಿ ಅಥವಾ ಕರ್ಮಗಳಲ್ಲಿ ಆಸಕ್ತನಾಗಿಲ್ಲದೆ ಎಲ್ಲಾ ಸಂಕಲ್ಪಗಳನ್ನೂ ಬಿಟ್ಟುಬಿಟ್ಟಾಗ ಯೋಗಾರೂಢನೆನಿಸಿಕೊಳ್ಳುತ್ತಾನೆ. ೪

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ

ಆತ್ಮದಿಂದ ಮನುಷ್ಯನು ಆತ್ಮವನ್ನು ಉದ್ಧರಿಸಬೇಕು, ಅದನ್ನು ಅಧೋಗತಿಗೆ ತರಬಾರದು. ಆತ್ಮವೇ ಆತ್ಮದ ಬಂಧುವು, ಮತ್ತು ಆತ್ಮವೇ ಆತ್ಮದ ಶತ್ರುವು. ೫

ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್

ಯಾರು ತನ್ನ ಬಲದಿಂದ ಮನಸ್ಸನ್ನು ಗೆಲ್ಲುತ್ತಾನೊ ಅವನಿಗೇ ಆತ್ಮವು ಬಂಧುವು; ಯಾರು ಆತ್ಮವನ್ನು ಗೆಲ್ಲುವದಿಲ್ಲವೊ ಅವನು ತನ್ನನ್ನು ಕುರಿತೇ ಶತ್ರುವಿನಂತೆ ವ್ಯವಹರಿಸುತ್ತಾನೆ. ೬

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ

ಯಾರು ತನ್ನ ಮನಸ್ಸನ್ನು ಗೆಲ್ಲುತ್ತಾನೊ ಮತ್ತು ಯಾರು ಸಂಪೂರ್ಣವಾಗಿ ಶಾಂತನಾಗಿದ್ದಾನೊ ಅವನ ಆತ್ಮವು ಶೀತ--ಉಷ್ಣ, ಸುಖ--ದುಃಖ ಮತ್ತು ಮಾನ--ಅಪಮಾನಗಳಲ್ಲಿ ಒಂದೇ ಸಮನಾಗಿರುತ್ತದೆ. ೭

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ

ಯಾರು ಜ್ಞಾನ ಮತ್ತು ಅನುಭವ, ಇವುಗಳಿಂದ ತೃಪ್ತನಾಗಿದ್ದಾನೊ, ಯಾರು ಅವಿಚಲನೊ, ಯಾರು ಇಂದ್ರಿಯಗಳನ್ನು ಗೆದ್ದಿದ್ದಾನೊ ಮತ್ತು ಯಾರಿಗೆ ಮಣ್ಣು, ಕಲ್ಲು ಮತ್ತು ಚಿನ್ನ ಇವು ಸಮನಾಗಿವೆಯೊ, ಅಂತಹ ಈಶ್ವರಪರಾಯಣನಾದ ಮನುಷ್ಯನು ಯೋಗಿಯೆನಿಸಿಕೊಳ್ಳುತ್ತಾನೆ. ೮

ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ

ಒಳಿತನ್ನು ಕೋರುವವನು, ಗೆಳೆಯ, ಶತ್ರು, ನಿಷ್ಪಕ್ಷಪಾತಿ, ಇಬ್ಬರಿಗೂ ಒಳಿತನ್ನೆಳಿಸುವವನು, ದ್ವೇಷಿ, ಬಂಧು, ಸಾಧು, ಪಾಪಿ—ಇವರೆಲ್ಲರಲ್ಲಿಯೂ ಸಮಾನ ಭಾವವನ್ನಿಡುವವನು ಶ್ರೇಷ್ಠನು. ೯

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ

ಚಿತ್ತವನ್ನು ಸ್ಥಿರಪಡಿಸಿ, [ವಿಷಯ--] ವಾಸನೆ ಮತ್ತು ಸಂಗ್ರಹ [ಶೇಖರಿಸುವದು] ಇವುಗಳನ್ನು ತ್ಯಜಿಸಿ, ಒಬ್ಬನೇ ಏಕಾಂತದಲ್ಲಿದ್ದು ಯೋಗಿಯು ನಿರಂತರವೂ ಆತ್ಮವನ್ನು ಪರಮಾತ್ಮನೊಡನೆ ಜೋಡಿಸಬೇಕು. ೧೦

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ

ಪವಿತ್ರವಾದ ಸ್ಥಳದಲ್ಲಿ, ಕುಶ [ದರ್ಭೆ] ,ಜಿಂಕೆಯ ಚರ್ಮ, ಬಟ್ಟೆ, ಇವುಗಳನ್ನು ಒಂದರಮೇಲೊಂದು ಹಾಸಿರುವ, ಬಹು ತಗ್ಗೂ ಅಲ್ಲದೆ ಬಹು ಎತ್ತರವೂ ಅಲ್ಲದೆ ಇರುವ, ಸ್ಥಿರವಾದ ಆಸನವನ್ನು ತನಗಾಗಿ ಮಾಡಿಕೊಂಡು ಅಲ್ಲಿ ಏಕಾಗ್ರವಾದ ಮನಸ್ಸಿನಿಂದ ಕುಳಿತು ಚಿತ್ತವನ್ನೂ ಇಂದ್ರಿಯಗಳನ್ನೂ ವಶಮಾಡಿಕೊಂಡು ಆತ್ಮಶುದ್ಧಿಗಾಗಿ ಯೋಗವನ್ನು ಸಾಧಿಸಬೇಕು. ೧೧,೧೨

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯರ್
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ

ಶರೀರ, ಕತ್ತು ಮತ್ತು ತಲೆ, ಇವುಗಳನ್ನು ಸಮರೇಖೆಯಲ್ಲಿ ಅಚಲವಾಗಿಟ್ಟು, ಸ್ಥಿರನಾಗಿದ್ದು, ಅಲ್ಲಿ ಇಲ್ಲಿ ನೋಡುತ್ತಿರದೆ ತನ್ನ ಮೂಗಿನ ತುದಿಯಮೇಲೆ ದೃಷ್ಟಿಯನ್ನು ನೆಟ್ಟು, ಪೂರ್ಣ ಶಾಂತಿಯಿಂದ, ಭಯವಿಲ್ಲದವನಾಗಿ, ಬ್ರಹ್ಮಚರ್ಯದಲ್ಲಿ ದೃಢನಾಗಿದ್ದು, ಮನಸ್ಸನ್ನು ಅಂಕೆಯಲ್ಲಿಟ್ಟು, ನನ್ನಲ್ಲ ಪರಾಯಣನಾಗಿ ಯೋಗಿಯು ನನ್ನ ಧ್ಯಾನದಲ್ಲಿ ತೊಡಗಿ ಕುಳಿತುಕೊಳ್ಳಬೇಕು. ೧೩,೧೪

ಟಿಪ್ಪಣಿ—ಮೂಗಿನ ತುದಿಯೆಂದರೆ ಹುಬ್ಬುಗಳ ನಡುವೆ ಇರುವ ಭಾಗ—ಅ. ೫, ಶ್ಲೋ. ೨೭ನ್ನು ನೋಡಿ. ಬ್ರಹ್ಮಚರ್ಯವ್ರತವೆಂದರೆ ಕೇವಲ ವೀರ್ಯಸಂಗ್ರಹವೊಂದಲ್ಲ ; [ಅದರಲ್ಲಿ] ಬ್ರಹ್ಮವನ್ನು ಪಡೆಯಲು ಆವಶ್ಯಕವಾದ ಅಹಿಂಸಾದಿ ವ್ರತಗಳೆಲ್ಲವೂ ಸೇರಿವೆ.

ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ

ಈ ಪ್ರಕಾರವಾಗಿ ಯಾರ ಮನಸ್ಸು ನಿಯಮದಲ್ಲಿರುತ್ತದೆಯೊ ಅಂತಹ ಯೋಗಿಯು ಆತ್ಮವನ್ನು ಪರಮಾತ್ಮನೊಡನೆ ಅನುಸಂಧಾನಗೈಯುತ್ತಾನೆ ಮತ್ತು ನನ್ನ ಪ್ರಾಪ್ತಿಯಲ್ಲಿ ಇರತಕ್ಕಂತಹ ಮೋಕ್ಷರೂಪಿಯಾದ ಪರಮ ಶಾಂತಿಯನ್ನು ಪಡೆಯುತ್ತಾನೆ. ೧೫

ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ

ಎಲೈ ಅರ್ಜುನನೆ, ಈ ಸಮತೆಯೆಂಬ ಯೋಗವಂತು ಗಬಗಬ ತಿನ್ನುವವನಿಗೆ ದೊರಕುವದಿಲ್ಲ; ಏನೂ ಇಲ್ಲದ ಉಪವಾಸಿಗೆ ಲಭಿಸುವದಿಲ್ಲ; ಹಾಗೆಯೇ ಅದು ಅತಿಯಾಗಿ ನಿದ್ದೆ ಮಾಡುವವನಿಗಾಗಲಿ ಅತಿಯಾಗಿ ನಿದ್ದೆಗೆಡುವವನಾಗಲಿ ಪ್ರಾಪ್ತವಾಗುವದಿಲ್ಲ. ೧೬

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ

ಆಹಾರ--ವಿಹಾರದಲ್ಲಿಯೂ ಇತರೇತರ ಕರ್ಮದಲ್ಲಿಯೂ ನಿದ್ದೆ ಮಾಡುವದರಲ್ಲಿಯೂ ಎಚ್ಚೆತ್ತಿರುವದರಲ್ಲಿಯೂ ಪರಿಮಿತಿಯುಳ್ಳವನ ಯೋಗವು ದುಃಖವನ್ನು ಕಳೆಯುವದಾಗಿರುವದು ೧೭

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ
ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ

ಒಳ್ಳೆಯ ರೀತಿಯಲ್ಲಿ ಮನಸ್ಸು ಆತ್ಮದಲ್ಲಿ ಸ್ಥಿರವಾಗಿ ಮನುಷ್ಯನು ಎಲ್ಲಾ ಇಚ್ಛೆಗಳಲ್ಲಿಯೂ ನಿಸ್ಪೃಹನಾಗಿಬಿಟ್ಟಾಗ ಅವನು ಯೋಗಿಯೆಂದು ಕರೆಸಿಕೊಳ್ಳುತ್ತಾನೆ ೧೮

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ

ಆತ್ಮವನ್ನು ಪರಮಾತ್ಮನೊಡನೆ ಸೇರಿಸುವ ಉದ್ಯೋಗವನ್ನು ಮಾಡುವ, ಸ್ಥಿರಚಿತ್ತನಾದ ಯೋಗಿಯ ಸ್ಥಿತಿಯು ಗಾಳಿಯಿಲ್ಲದ ಜಾಗದಲ್ಲಿ ಅಲುಗಾಡದೆ ಇರುವ ದೀಪದಂತೆಂದು ಹೇಳಲ್ಪಟ್ಟಿದೆ. ೧೯

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ
ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ
ಸ ನಿಶ್ಚಯೇನ ಯೋಕ್ತವ್ಯೋ ಯೋಗೋ ನಿರ್ವಿಣ್ಣಚೇತಸಾ

ಯೋಗದ ಸೇವೆಯಿಂದ ಅಂಕೆಗೆ ಬಂದಿರುವ ಮನಸ್ಸು ಎಲ್ಲಿ ಶಾಂತಿಯನ್ನು ಪಡೆಯುತ್ತದೆಯೊ, ಎಲ್ಲಿ ಆತ್ಮದಿಂದಲೇ ಆತ್ಮವನ್ನರಿತು ಆತ್ಮದಲ್ಲಿ ಮನುಷ್ಯನು ಸಂತೋಷವನ್ನು ಪಡೆಯುತ್ತಾನೊ ಮತ್ತು ಎಲ್ಲಿ ಇಂದ್ರಿಯಗಳಿಗೆ ಗೋಚರಿಸದ, ಬುದ್ಧಿಯಿಂದ ಗ್ರಹಿಸಲು ಯೋಗ್ಯವಾದ ಅನಂತಸುಖವು ಉಂಟಾಗುತ್ತದೊ, ಎಲ್ಲಿದ್ದು ಮನುಷ್ಯನು ಮೂಲವಸ್ತುವಿನಿಂದ ಚಲಾಯಮಾನನಾಗುವದಿಲ್ಲವೊ ಮತ್ತು ಯಾವದನ್ನು ಪಡೆದಮೇಲೆ ಎರಡನೆಯ ಯಾವ ಲಾಭವನ್ನೂ ಅದಕ್ಕಿಂತ ಹೆಚ್ಚೆಂದು ಅವನು ಭಾವಿಸುವದಿಲ್ಲವೊ ಮತ್ತು ಯಾವದರಲ್ಲಿ ಸ್ಥಿರನಾಗಿದ್ದು ಮಹಾದುಃಖದಿಂದ ಕೂಡ ಅಲ್ಲಾಡುವದಿಲ್ಲವೊ, ಆ ದುಃಖದ ಪ್ರಸಂಗವಿಲ್ಲದ ಸ್ಥಿತಿಯ ಹೆಸರು ಯೋಗದ ಸ್ಥಿತಿಯೆಂದರಿಯಬೇಕು. ಈ ಯೋಗವು ಬೇಸರವಿಲ್ಲದೆ ದೃಢತಾಪೂರ್ವಕವಾಗಿ ಸಾಧಿಸಲು ಯೋಗ್ಯವಾದುದು. ೨೦—೨೩

ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ

ಶನೈಃಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್

ಸಂಕಲ್ಪದಿಂದ ಉತ್ಪನ್ನವಾಗುವ ಸಮಸ್ತ ಇಚ್ಛೆಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಮನಸ್ಸಿನಿಂದಲೇ ಇಂದ್ರಿಯಸಮೂಹವನ್ನು ಎಲ್ಲಾ ದಿಕ್ಕುಗಳಿಂದಲೂ ಒಳ್ಳೆಯ ರೀತಿಯಲ್ಲಿ ನಿಯಮಕ್ಕೆ ತಂದು,

ಅಚಲವಾದ ಬುದ್ಧಿಯಿಂದ ಯೋಗಿಯು ಮೆಲ್ಲಮೆಲ್ಲನೆ ಶಾಂತನಾಗುತ್ತಾ ಬರಬೇಕು, ಮತ್ತು ಮನಸ್ಸನ್ನು ಆತ್ಮದಲ್ಲಿ ಪೋಣಿಸಿ, ಬೇರೆ ಯಾವ ವಿಷಯದ ವಿಚಾರವನ್ನೂ ಮಾಡದಿರಬೇಕು. ೨೪,೨೫

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್

ಚಂಚಲವಾದ ಅಸ್ಥಿರವಾದ ಮನಸ್ಸು ಎಲ್ಲೆಲ್ಲಿಗೆ ಓಡುವದೊ ಅಲ್ಲಲ್ಲಿಂದ (ಯೋಗಿಯು) ಅದನ್ನು ನಿಯಮಕ್ಕೆ ತಂದು ತನ್ನ ವಶದಲ್ಲಿಟ್ಟುಕೊಳ್ಳಬೇಕು. ೨೬

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಂ
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಂ

ಯಾರ ಮನಸ್ಸು ಒಳಿತಾಗಿ ಶಾಂತವಾಗಿದೆಯೊ, ಯಾರ [ಮನೋ-] ವಿಕಾರಗಳು ಶಾಂತವಾಗಿಬಿಟ್ಟವೆಯೊ, ಅಂತಹ ಬ್ರಹ್ಮಮಯನಾದ, ಪಾಪರಹಿತನಾದ ಯೋಗಿಯು ಅವಶ್ಯವಾಗಿ ಉತ್ತಮ ಸುಖವನ್ನು ಪಡೆಯುತ್ತಾನೆ. ೨೭

ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ

ಆತ್ಮದೊಡನೆ ನಿರಂತರವೂ ಅನುಸಂಧಾನಮಾಡುತ್ತಾ, ಪಾಪರಹಿತನಾಗಿರುವ ಈ ಯೋಗಿಯು ಸುಲಭವಾಗಿ ಬ್ರಹ್ಮಪ್ರಾಪ್ತಿಯೆಂಬ ಅನಂತ ಸುಖವನ್ನು ಅನುಭವಿಸುತ್ತಾನೆ. ೨೮

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ

ಎಲ್ಲ ಕಡೆಯೂ ಸಮಭಾವವನ್ನಿಡುವ ಯೋಗಿಯು ತನ್ನನ್ನು ಸರ್ವಭೂತಗಳಲ್ಲಿಯೂ ಸರ್ವಭೂತಗಳನ್ನು ತನ್ನಲ್ಲಿಯೂ ಕಾಣುತ್ತಾನೆ. ೨೯

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ

ಯಾರು ನನ್ನನ್ನು ಎಲ್ಲೆಡೆಯಲ್ಲಿಯೂ ಎಲ್ಲವನ್ನೂ ನನ್ನಲ್ಲಿಯೂ ನೋಡುತ್ತಾನೊ ಅವನು ನನ್ನ ದೃಷ್ಟಿಪಥದಿಂದ ದೂರನಾಗುವದಿಲ್ಲ; ನಾನು ಅವನ ಕಣ್ಣೆದಿರಿನಿಂದಲೂ ದೂರವಾಗುವದಿಲ್ಲ. ೩೦

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ

ನನ್ನಲ್ಲಿ ಲೀನನಾಗಿ, ಸಮಸ್ತ ಭೂತಗಳಲ್ಲಿಯೂ ವಾಸಿಸುವ ನನ್ನನ್ನು ಭಜಿಸುವ ಯೋಗಿಯು, ಅವನು ಯಾವ ತೆರದಲ್ಲಿ ವರ್ತಿಸಿದರೂ, ನನ್ನಲ್ಲಿಯೇ ವರ್ತಿಸುತ್ತಾನೆ. ೩೧

ಟಿಪ್ಪಣಿ— 'ತಾನು' ಎಂಬುದು ಇರುವವರೆಗಂತು ಪರಮಾತ್ಮನ ದೂರವಿರುತ್ತಾನೆ. 'ತಾನು' ಎಂಬುದಳಿದಾಗಲೇ—ಶೂನ್ಯವಾದಾಗಲೇ—[ಮನುಷ್ಯನು] ಒಬ್ಬ ಪರಮಾತ್ಮನನ್ನು ಎಲ್ಲದರಲ್ಲಿಯೂ ಕಾಣುತ್ತಾನೆ. ಮತ್ತು ಅ. ೧೩, ಶ್ಲೋ. ೨೩ರ ಟಿಪ್ಪಣಿಯನ್ನು ನೋಡಿ.

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ

ಎಲೈ ಅರ್ಜುನನೆ, ತನ್ನಂತೆಯೇ ಎಲ್ಲರನ್ನೂ ನೋಡುವ, ಮತ್ತು ಸುಖವಾಗಲಿ ದುಃಖವಾಗಲಿ ಎರಡನ್ನೂ ಸಮಾನವಾಗೆಣಿಸುವ ಯೋಗಿಯು ಶ್ರೇಷ್ಠನೆನಿಸಿಕೊಳ್ಳುತ್ತಾನೆ. ೩೨

ಅರ್ಜುನ ಉವಾಚ—

ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ
ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ಸ್ಥಿತಿಂ ಸ್ಥಿರಾಂ

ಅರ್ಜುನನೆಂದನು—

ಹೇ ಮಧುಸೂದನ, ಈ ನೀನು ಹೇಳಿದ (ಸಮತೆಯೆಂಬ) ಯೋಗದ ಸ್ಥಿರತೆಯನ್ನು ನಾನು ನನ್ನ ಚಂಚಲತೆಯ ಕಾರಣ ನೋಡಲಾರೆನು. ೩೩

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ

ಏಕೆಂದರೆ, ಎಲೈ ಕೃಷ್ಣನೆ, ಮನಸ್ಸು ಚಂಚಲವಾದುದೇ ಆಗಿದೆ; [ಅದು] ಮನುಷ್ಯನನ್ನು ಕಡೆದುಬಿಡುತ್ತದೆ; [ಅದು] ಬಹು ಬಲಿಷ್ಠವಾದುದು. ಗಾಳಿಯನ್ನು ಕಟ್ಟುವದು ಹೇಗೆ ಬಹು ಕಷ್ಟವೊ ಹಾಗೆ ಮನಸ್ಸನ್ನು ವಶಪಡಿಸಿಕೊಳ್ಳುವದು ಕೂಡ ನಾನು ಕಠಿಣ ವೆಂದೆಣಿಸುತ್ತೇನೆ. ೩೪

ಶ್ರೀ ಭಗವಾನುವಾಚ—

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ

ಶ್ರೀ ಭಗವಂತನು ಹೇಳಿದನು—

ಎಲೈ ಮಹಾಬಾಹುವೆ, ಮನಸ್ಸು ಚಂಚಲವಾದುದರಿಂದ [ಅದನ್ನು] ವಶಮಾಡುವದು ಕಷ್ಟವೆಂಬುದು ಸತ್ಯವಾದ ಮಾತು. ಆದರೆ, ಎಲೈ ಕೌಂತೆಯನೆ, ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಅದನ್ನು ವಶಮಾಡಬಹುದು. ೩೫

ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ

ಇದು ನನ್ನ ಮತವು: ಯಾರ ಮನಸ್ಸು ತನ್ನ ವಶದಲ್ಲಿಲ್ಲವೊ ಅವನಿಗೆ ಯೋಗಸಾಧನೆಯು ಬಹು ಕಠಿಣವು; ಆದರೆ ಯಾರ ಮನಸ್ಸು ತನ್ನ ವಶವಲ್ಲದೆಯೊ ಮತ್ತು ಯಾರು ಯತ್ನಶೀಲನೊ ಅವನು ಉಪಾಯದ ಮೂಲಕ [ಯೋಗವನ್ನು] ಸಾಧಿಸಬಲ್ಲನು. ೩೬

ಅರ್ಜುನ ಉವಾಚ—

ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ

ಅರ್ಜುನನೆಂದನು-—

ಹೇ ಕೃಷ್ಣ, ಯಾರು ಶ್ರದ್ಧಾವಂತನಾಗಿದ್ದರೂ ಪ್ರಯತ್ನವು ಕಡಿಮೆಯಾದುದರಿಂದ ಯೋಗಭ್ರಷ್ಟನಾಗಿಬಿಡುತ್ತಾನೊ ಅವನು ಸಫಲತೆಯನ್ನು ಪಡೆಯದಿರುವದರಿಂದ ಯಾವ ಗತಿಯನ್ನು ಹೊಂದುತ್ತಾನೆ ? ೩೭

ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ

ಎಲೈ ಮಹಾಬಾಹುವೆ, ಯೋಗದಿಂದ ಭ್ರಷ್ಟನಾಗಿ, ಬ್ರಹ್ಮಮಾರ್ಗದಿಂದ ದಾರಿತಪ್ಪಿದವನಾಗಿ ಅವನು ಛಿನ್ನಭಿನ್ನಗಳಾದ ಮೋಡಗಳಂತೆ ಉಭಯಭ್ರಷ್ಟನಾಗಿ ನಾಶವನ್ನೈದುವದಿಲ್ಲವೆ ? ೩೮

ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ

ಹೇ ಕೃಷ್ಣ, ಈ ನನ್ನ ಸಂಶಯವು ನೀನು ದೂರಮಾಡಲು ಯೋಗ್ಯವಾದುದು. ನಿನ್ನನ್ನುಳಿದು ಈ ಸಂಶಯವನ್ನು ದೂರಮಾಡುವವರಿನ್ನಾರೂ ಇಲ್ಲ. ೩೯

ಶ್ರೀಭಗವಾನುವಾಚ—

ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ
ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ

ಶ್ರೀ ಭಗವಂತನೆಂದನು—

ಹೇ ಪಾರ್ಥ, ಇಂತಹ ಮನುಷ್ಯರ ನಾಶವು ಈ ಲೋಕದಲ್ಲಿಯೂ ಆಗುವದಿಲ್ಲ, ಪರಲೋಕದಲ್ಲಿಯೂ ಆಗುವದಿಲ್ಲ. ಅಪ್ಪಾ, ಕಲ್ಯಾಣಮಾರ್ಗದಲ್ಲಿ ಹೋಗುವವರಿಗೆ ಎಂದಿಗೂ ದುರ್ಗತಿಯುಂಟಾಗುವದಿಲ್ಲ. ೪೦

ಪ್ರಾಪ್ಯ ಪುಣ್ಯಕೃತಾಂಲ್ಲೋಕಾನುಷಿತ್ವಾ ಶಾಶ್ವತೀಃ ಸಮಾಃ
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ

ಪುಣ್ಯಶಾಲಿಗಳು ಪಡೆಯುವ ಸ್ಥಾನವನ್ನು ಹೊಂದಿ ಅಲ್ಲಿ ದೀರ್ಘಕಾಲವಿದ್ದ ಮೇಲೆ ಯೋಗಭ್ರಷ್ಟನಾದ ಮನುಷ್ಯನು ಪವಿತ್ರನೂ ಸಾಧನಶೀಲನೂ ಆದವನ ಮನೆಯಲ್ಲಿ ಹುಟ್ಟುತ್ತಾನೆ. ೪೧

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ

ಅಥವಾ ಜ್ಞಾನವಂತನಾದ ಯೋಗಿಯ ಕುಲದಲ್ಲಿಯೇ ಜನ್ಮ ತಾಳುತ್ತಾನೆ. ಪ್ರಪಂಚದಲ್ಲಿ ಇಂತಹ ಜನ್ಮವು ಅವಶ್ಯವಾಗಿ ದುರ್ಲಭವಾದುದು. ೪೨

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ

ಎಲೈ ಕುರುನಂದನನೆ, ಅಲ್ಲಿ ಅವನಿಗೆ ಪೂರ್ವಜನ್ಮದ ಬುದ್ಧಿ ಸಂಸ್ಕಾರಗಳು ಲಭಿಸುತ್ತವೆ. ಮತ್ತು ಅಲ್ಲಿಂದ ಅವನು ಮೋಕ್ಷಕ್ಕಾಗಿ ಮುಂದುವರಿಯುತ್ತಾನೆ. ೪೩

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ

ಅದೇ ಪೂರ್ವದ ಅಭ್ಯಾಸದ ಕಾರಣ ಅವನು ಅವಶ್ಯವಾಗಿ ಯೋಗದ ಕಡೆಗೆ ಆಕರ್ಷಿತನಾಗುತ್ತಾನೆ. ಯೋಗದ ಜಿಜ್ಞಾಸು ಕೂಡ ಇಚ್ಛೆಯಿಂದೊಡಗೂಡಿ ವೈದಿಕ ಕರ್ಮ ಮಾಡುವವನ ಸ್ಥಿತಿಯನ್ನು ದಾಟಿಹೋಗುತ್ತಾನೆ. ೪೪

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ

ಮತ್ತು ಉತ್ಸಾಹದಿಂದ ಉದ್ಯೋಗ ಮಾಡುತ್ತಾ ಯೋಗಿಯು ಪಾಪ ಮುಕ್ತನಾಗಿ ಅನೇಕ ಜನ್ಮದಿಂದ ವಿಶುದ್ಧನಾಗಿ ಪರಮಗತಿಯನ್ನೈದುತ್ತಾನೆ. ೪೫

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ

ತಪಸ್ವಿಗಿಂತ ಯೋಗಿಯು ಹೆಚ್ಚಿನವನು; ಜ್ಞಾನಿಗಿಂತ ಕೂಡ ಅವನು ಅಧಿಕನೆಂದೆಣಿಸಲ್ಪಡುತ್ತಾನೆ; ಅದೇ ರೀತಿಯಲ್ಲೇ ಕರ್ಮಕಾಂಡಿಗಿಂತಲೂ ಅವನು ಹೆಚ್ಚಿನವನು. ಆದುದರಿಂದ, ಅರ್ಜುನನೆ, ನೀನು ಯೋಗಿಯಾಗು. ೪೬

ಟಿಪ್ಪಣಿ—ಇಲ್ಲಿ ತಪಸ್ವಿಯ ತಪಸ್ಯೆಯು ಫಲೇಚ್ಛೆಯಿಂದ ಕೂಡಿದುದಾಗಿದೆ. ಜ್ಞಾನಿಯೆಂದರೆ ಇಲ್ಲಿ ಅನುಭವ ಜ್ಞಾನಿಯೆಂದರ್ಥವಲ್ಲ.

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ
ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ

ಸಮಸ್ತ ಯೋಗಿಗಳಲ್ಲಿ ಕೂಡ ಯಾರು ನನ್ನಲ್ಲಿ ಮನವನ್ನು ಪೋಣಿಸಿ ನನ್ನನ್ನು ಶ್ರದ್ಧೆಯಿಂದ ಭಜಿಸುತ್ತಾನೊ ಅವನನ್ನು ನಾನು ಸರ್ವಶ್ರೇಷ್ಠ ಯೋಗಿಯೆಂದೆಣಿಸುತ್ತೇನೆ. ೪೭

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀ ಕೃಷ್ಣಾರ್ಜುನಸಂವಾದದ ಧ್ಯಾನಯೋಗವೆಂಬ ಆರನೆಯ ಅಧ್ಯಾಯವು ಸಮಾಪ್ತವಾದುದು.



೭

# ಜ್ಞಾನವಿಜ್ಞಾನಯೋಗ



ಈ ಅಧ್ಯಾಯದಲ್ಲಿ ಈಶ್ವರತತ್ವ ಮತ್ತು ಈಶ್ವರ ಭಕ್ತಿ ಎಂದರೇನು ಎಂಬುದನ್ನು ತಿಳಿಸುವದು ಆರಂಭವಾಗಿದೆ.

ಶ್ರೀಭಗವಾನುವಾಚ—

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು

**ಶ್ರೀ ಭಗವಂತನು ಹೇಳಿದನು —**

**ಎಲೈ ಪಾರ್ಥನೆ, ನನ್ನಲ್ಲಿ ಮನವನ್ನು ಪೋಣಿಸಿ, ನನ್ನನ್ನು ಆಶ್ರಯಿಸಿ ಯೋಗವನ್ನು ಸಾಧಿಸುತ್ತಾ ನೀನು ನಿಶ್ಚಯಪೂರ್ವಕವಾಗಿಯೂ ಸಂಪೂರ್ಣರೂಪದಿಂದಲೂ ನನ್ನನ್ನು ಯಾವ ರೀತಿಯಲ್ಲಿ ಅರಿಯಬಲ್ಲೆಯೆಂಬುದನ್ನು ಕೇಳು.** ೧

ಜ್ಞಾನಂ ತೇಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ
ಯಜ್ಜ್ಞಾತ್ವಾ ನೇಹ ಭೂಯೋನ್ಯಜ್ಜ್ಞಾತವ್ಯಮವಶಿಷ್ಯತೇ

**ಅನುಭವಯುಕ್ತವಾದ ಈ ಜ್ಞಾನವನ್ನು ನಾನು ನಿನಗೆ ಸಂಪೂರ್ಣವಾಗಿ ಹೇಳುವೆನು. ಇದನ್ನರಿತಮೇಲೆ ಈ ಲೋಕದಲ್ಲಿ ತಿಳಿದುಕೊಳ್ಳಬೇಕಾದುದು ಹೆಚ್ಚಿನದೇನೂ ಇರುವದಿಲ್ಲ.** ೨

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ

ಸಾವಿರಾರು ಮಂದಿಯಲ್ಲಿ ಯಾರೋ ಒಬ್ಬನು ಮಾತ್ರ ಸಿದ್ಧಿಗಾಗಿ ಪ್ರಯತ್ನಮಾಡುತ್ತಾನೆ. ಪ್ರಯತ್ನಪಡುವ ಸಿದ್ಧರಲ್ಲಿಯೂ ಯಾರೋ ಒಬ್ಬನು ಮಾತ್ರ ನನ್ನನ್ನು ವಾಸ್ತವಿಕ ರೂಪದಿಂದ ಗುರುತಿಸುತ್ತಾನೆ. ೩

ಭೂಮಿರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವ ಚ
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಭಾವ—ನನ್ನ ಪ್ರಕೃತಿಯು ಈ ಎಂಟು ಬಗೆಯಾದುದು. ೪

ಟಿಪ್ಪಣಿ—ಈ ಎಂಟು ತತ್ವಗಳುಳ್ಳ ಸ್ವರೂಪವು ಕ್ಷೇತ್ರವು ಅಥವಾ ಕ್ಷರ ಪುರುಷನು. ಅ. ೧೩, ಶ್ಲೋ. ೫ ಮತ್ತು ಅ ೧೫, ಶ್ಲೋ ೧೬ ನ್ನು ನೋಡಿ.

ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್

ಇದು ಅಪರಾ ಪ್ರಕೃತಿಯು. ಇದಕ್ಕಿಂತಲೂ ಹೆಚ್ಚಿನದಾದ ಪರಾಪ್ರಕೃತಿಯು ಈ ಜೀವರೂಪವು. ಎಲೈ ಮಹಾಬಾಹುವೆ, ಈ ಜಗತ್ತು ಅದರ ಆಧಾರದ ಮೇಲೆ ನಡೆಯುತ್ತಾ ಇದೆ. ೫

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ
ಅಹಂ ಕೃತ್ಸ್ನಸ್ಯ ಜಗತಃ ಪ್ರಭವ ಪ್ರಲಯಸ್ತಥಾ

ಸಕಲ ಭೂತಗಳ ಉತ್ಪತ್ತಿಯ ಕಾರಣವು ಈ ಎರಡೆಂದು ತಿಳಿ. ಇಡೀ ಜಗತ್ತಿನ ಉತ್ಪತ್ತಿಗೂ ಲಯಕ್ಕೂ ಕಾರಣನು ನಾನು. ೬

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ

ಎಲೈ ಧನಂಜಯನೆ, ನನಗಿಂತ ಹೆಚ್ಚಿನದು ಇನ್ನಾವದೂ ಇಲ್ಲ. ದಾರದಲ್ಲಿ ಮಣಿಗಳು ಪೋಣಿಸಿರುವಂತೆ ಇದೆಲ್ಲವೂ ನನ್ನಲ್ಲಿ ಪೋಣಿಸಿದೆ. ೭

ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು

ಹೇ ಕೌಂತೇಯ, ನೀರಿನಲ್ಲಿ ರಸವು ನಾನು; ಸೂರ್ಯಚಂದ್ರರಲ್ಲಿ ತೇಜಸ್ಸು ನಾನು; ಸಕಲ ವೇದಗಳಲ್ಲಿ ಓಂಕಾರವು ನಾನು; ಆಕಾಶದಲ್ಲಿ ಶಬ್ದವು ನಾನು; ಮತ್ತು ಪುರುಷರ ಪರಾಕ್ರಮವು ನಾನು. ೮

ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು

ಭೂಮಿಯಲ್ಲಿ ಸುಗಂಧವು ನಾನು; ಬೆಂಕಿಯಲ್ಲಿ ತೇಜಸ್ಸು ನಾನು; ಸಕಲಪ್ರಾಣಿಗಳ ಜೀವನವು ನಾನು; ತಪಸ್ವಿಯ ತಪಸ್ಸು ನಾನು. ೯

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ

ಎಲೈ ಪಾರ್ಥನೆ, ಸಮಸ್ತ ಜೀವಗಳ ಸನಾತನ ಬೀಜವು ನಾನೆಂದು ತಿಳಿ. ಧೀಮಂತನ ಬುದ್ಧಿಯು ನಾನು; ತೇಜಸ್ವಿಯ ತೇಜಸ್ಸು ನಾನು. ೧೦

ಬಲಂ ಬಲವತಾಮಸ್ಮಿ ಕಾಮರಾಗವಿವರ್ಜಿತಂ
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ

ಬಲಿಷ್ಠರ ಕಾಮ ಮತ್ತು ರಾಗ, ಇವುಗಳಿಲ್ಲದ, ಬಲವು ನಾನು. ಮತ್ತು, ಎಲೈ ಭರತರ್ಷಭನೆ, ಪ್ರಾಣಿಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಇಚ್ಛೆಯು ನಾನು. ೧೧

ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ
ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ

ಯಾವಯಾವ ಸಾತ್ವಿಕ, ರಾಜಸ ಮತ್ತು ತಾಮಸ ಭಾವಗಳಿವೆಯೊ, ಅವು ನನ್ನಿಂದ ಉತ್ಪನ್ನವಾದುವೆಂದರಿಯಬೇಕು. ಆದರೆ ನಾನು ಅವುಗಳಲ್ಲಿರುವೆನೆಂದಲ್ಲ, ಅವು ನನ್ನಲ್ಲಿವೆ. ೧೨

ಟಿಪ್ಪಣಿ—ಈ ಭಾವಗಳ ಮೇಲೆ ಪರಮಾತ್ಮನು ನಿರ್ಭರನಾಗಿಲ್ಲ, ಆ ಭಾವಗಳು ಅವನಲ್ಲಿ ನಿರ್ಭರವಾಗಿವೆ. [ಅವು] ಅವನ ಆಧಾರದ ಮೇಲೆ ಇರುತ್ತವೆ, ಮತ್ತು ಅವನ ವಶದಲ್ಲಿರುತ್ತವೆ.

ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ

ಈ ಮೂರು ಗುಣಗಳ ಭಾವಗಳಿಂದ ಸಮಸ್ತ ಜಗತ್ತು ಮೋಹಿತವಾಗಿಬಿಟ್ಟಿದೆ. ಆದುದರಿಂದ ಅವುಗಳಿಗಿಂತ ಹೆಚ್ಚಿನವನೂ ಭಿನ್ನನೂ ಅವಿನಾಶಿಯಾದ ನಾನೆಂದು ಅದು ಗುರುತಿಸುವದಿಲ್ಲ. ೧೩

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ

ನನ್ನ ಈ ಮೂರು ಗುಣಗಳುಳ್ಳ ದೈವೀಮಾಯೆಯನ್ನು ದಾಟುವದು ಕಠಿಣ. ಆದರೆ ನನ್ನನ್ನೇ ಶರಣು ಹೊಗುವವರು ಈ ಮಾಯೆಯನ್ನು ದಾಟಿಬಿಡುತ್ತಾರೆ. ೧೪

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ
ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ

ದುರಾಚಾರಿಗಳೂ ಮೂಢರೂ ಅಧಮರೂ ಆದ ಮನುಷ್ಯರು ನನಗೆ ಶರಣಾಗತರಾಗುವದಿಲ್ಲ. ಅವರು ಆಸುರೀ ಭಾವವುಳ್ಳವರಾಗಿರುತ್ತಾರೆ; ಮತ್ತು ಮಾಯೆಯ ಮೂಲಕ ಅವರ ಜ್ಞಾನವು ಅಪಹರಿಸಲ್ಪಟ್ಟಿರುತ್ತದೆ. ೧೫

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ

ಎಲೈ ಅರ್ಜುನನೆ, ನಾಲ್ಕು ರೀತಿಯ ಸದಾಚಾರಿಗಳು ನನ್ನನ್ನು ಭಜಿಸುತ್ತಾರೆ—ದುಃಖಿಗಳು, ಜಿಜ್ಞಾಸುಗಳು, ಏನಾದರೂ ಹೊಂದಬೇಕೆಂಬ ಇಚ್ಛೆಯುಳ್ಳವರು ಅಥವಾ ಜ್ಞಾನಿಗಳು. ೧೬

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ

ಅವರುಗಳಲ್ಲಿ, ಸದಾ ಸಮಭಾವವುಳ್ಳ, ಒಬ್ಬನನ್ನೇ ಭಜಿಸುವ, ಜ್ಞಾನಿಯು ಶ್ರೇಷ್ಠನು. ನಾನು ಜ್ಞಾನಿಗೆ ಅತ್ಯಂತ ಪ್ರಿಯನು, ಮತ್ತು ಜ್ಞಾನಿಯು ನನಗೆ ಪ್ರಿಯನು. ೧೭

ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ

ಈ ಭಕ್ತರೆಲ್ಲರೂ ಒಳ್ಳೆಯವರು; ಆದರೆ ಜ್ಞಾನಿಯಾದರೊ ನನ್ನ ಆತ್ಮವೇ ಆಗಿದ್ದಾನೆಂದು ನನ್ನ ಮತ. ಏಕೆಂದರೆ ನನ್ನನ್ನು ಪಡೆಯುವದಕ್ಕಿಂತ ಹೆಚ್ಚು ಉತ್ತಮವಾದ ಇನ್ನಾವ ಗತಿಯೂ ಇಲ್ಲವೆಂಬುದನ್ನರಿತು ಆ ಯೋಗಿಯು ನನ್ನನ್ನೇ ಆಶ್ರಯಿಸುತ್ತಾನೆ. ೧೮

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ

ಅನೇಕ ಜನ್ಮಗಳ ಕಡೆಯಲ್ಲಿ ಜ್ಞಾನಿಯು ನನ್ನನ್ನು ಪಡೆಯುತ್ತಾನೆ. ಎಲ್ಲವೂ ವಾಸುದೇವಮಯವಾದುದೆಂದರಿತಿರುವಂತಹ ಮಹಾತ್ಮನು ಬಹು ದುರ್ಲಭನು ೧೯

ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ
ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ

ಯಾರ ಜ್ಞಾನವು ಅನೇಕ ಇಚ್ಛೆಗಳಿಂದ ಅಪಹೃತವಾಗಿದೆಯೊ ಅಂತಹ ಜನರು ತಮ್ಮ ಪ್ರಕೃತಿಗೆ ಅನುಸಾರವಾಗಿ ಬೇರೆಬೇರೆ ವಿಧಿಗಳನ್ನಾಶ್ರಯಿಸಿ ಇತರ ದೇವತೆಗಳನ್ನು ಶರಣುಹೊಗುತ್ತಾರೆ. ೨೦

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ

ಯಾವ ಯಾವ ಮನುಷ್ಯನು ಯಾವ ಯಾವ ಸ್ವರೂಪದ ಭಕ್ತಿಯನ್ನು ಶ್ರದ್ಧಾಪೂರ್ವಕವಾಗಿ ಮಾಡಲು ಇಷ್ಟಪಡುತ್ತಾನೊ ಆಯಾ ಸ್ವರೂಪದಲ್ಲಿ ಅವನ ಶ್ರದ್ಧೆಯನ್ನು ನಾನು ದೃಢಪಡಿಸುತ್ತೇನೆ. ೨೧

ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ
ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿತಾನ್

ಶ್ರದ್ಧಾಪೂರ್ವಕವಾಗಿ ಅವನು ಆಯಾ ಸ್ವರೂಪಗಳನ್ನು ಆರಾಧಿಸುತ್ತಾನೆ; ಮತ್ತು ಆ ಮೂಲಕ, ನಾನು ನಿರ್ಮಿಸಿದ, ಅವನು ಇಚ್ಛಿಸಿದ, ಆಸೆಗಳನ್ನು ಪೂರ್ಣ ಮಾಡುತ್ತಾನೆ. ೨೨

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ
ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ

ಆ ಅಲ್ಪ ಬುದ್ಧಿಯ ಜನರಿಗೆ ದೊರಕುವ ಫಲವು ನಾಶವಾಗತಕ್ಕದು. ದೇವತೆಗಳನ್ನು ಭಜಿಸುವವರು ದೇವತೆಗಳನ್ನು ಪಡೆಯುತ್ತಾರೆ; ನನ್ನನ್ನು ಭಜಿಸುವವರು ನನ್ನನ್ನು ಪಡೆಯುತ್ತಾರೆ. ೨೩

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ

ನನ್ನ ಪರಮ, ಅವಿನಾಶಿಯಾದ ಮತ್ತು ಅನುಪಮವಾದ ಸ್ವರೂಪವನ್ನರಿಯದ ಬುದ್ಧಿಹೀನರು ಇಂದ್ರಿಯಗಳಿಂದ ಅತೀತನಾದ ನನ್ನನ್ನು ಇಂದ್ರಿಯಗಮ್ಯನೆಂದು ಭಾವಿಸುತ್ತಾರೆ. ೨೪

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ

ನನ್ನ ಯೋಗಮಾಯೆಯಿಂದ ಆಚ್ಛಾದಿತನಾಗಿರುವದರಿಂದ—ಮುಚ್ಚಿದವನಾಗಿ—ನಾನು ಎಲ್ಲರಿಗೂ ಪ್ರಕಟನಾಗುವದಿಲ್ಲ. ಈ ಮೂಢಜಗತ್ತು ನಾನು ಜನ್ಮವಿಲ್ಲದವನೂ ಅಳಿವಿಲ್ಲದವನೂ ಎಂದು ಚೆನ್ನಾಗಿ ಅರಿತಿಲ್ಲ. ೨೫

ಟಿಪ್ಪಣಿ —ಈ ದೃಗ್ಗೋಚರವಾದ ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವಿದ್ದರೂ ಅಲಿಪ್ತನಾಗಿ ಇರುವದರ ಕಾರಣ ಪರಮಾತ್ಮನು ಅದೃಶ್ಯನಾಗಿ ಇರುವ ಭಾವವು ಅವನ ಯೋಗಮಾಯೆಯು.

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ

ಎಲೈ ಅರ್ಜುನನೆ, ಆಗಿಹೋದ, ಇಂದು ಇರುವ, ಮುಂದೆ ಉಂಟಾಗುವ ಸಮಸ್ತ ಭೂತಗಳನ್ನೂ ನಾನು ಬಲ್ಲೆನು; ಆದರೆ ನನ್ನನ್ನು ಯಾರೂ ಅರಿಯರು. ೨೬

ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ

ಹೇ ಭಾರತ, ಹೇ ಪರಂತಪ, ಇಚ್ಛೆ ಮತ್ತು ದ್ವೇಷ, ಇವುಗಳಿಂದ ಉತ್ಪನ್ನವಾಗುವ ಸುಖದುಃಖಾದಿ ದ್ವಂದ್ವದ ಮೋಹದಿಂದ ಎಲ್ಲಾ ಪ್ರಾಣಿಗಳೂ ಈ ಜಗತ್ತಿನಲ್ಲಿ ಮೂರ್ಛೆಗೊಂಡು ಇರುತ್ತವೆ. ೨೭

ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ

ಆದರೆ ಯಾವ ಸದಾಚಾರಿಗಳ ಪಾಪಗಳು ಕೊನೆಮುಟ್ಟಿವೆಯೊ ಮತ್ತು ಯಾರು ದ್ವಂದ್ವದ ಮೋಹದಿಂದ ಬಿಡುಗಡೆಹೊಂದಿಬಿಟ್ಟಿದ್ದಾರೊ ಆ ಅಚಲವ್ರತವಂತರು ನನ್ನನ್ನು ಭಜಿಸುತ್ತಾರೆ ೨೮

ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ

ನನ್ನನ್ನು ಆಶ್ರಯಿಸಿ ವೃದ್ಧಾಪ್ಯದಿಂದಲೂ ಮರಣದಿಂದಲೂ ಮುಕ್ತರಾಗುವ ಉದ್ಯೋಗ ಮಾಡುವವರು ಪೂರ್ಣಬ್ರಹ್ಮನನ್ನು, ಅಧ್ಯಾತ್ಮವನ್ನು ಮತ್ತು ಅಖಿಲ ಕರ್ಮವನ್ನು ಅರಿಯುತ್ತಾರೆ. ೨೯

ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ
ಪ್ರಯಾಣಕಾಲೇಪಿ ಚ ಮಾಂ ತೇ ವಿದುರ್ಯುಕ್ತಚೇತಸಃ

ನಾನು ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಯುಕ್ತನಾದವನು ಎಂದರಿತವರು ಸಮತೆಯನ್ನು ಹೊಂದಿ ನನ್ನನ್ನು ಮೃತ್ಯುಸಮಯದಲ್ಲಿಯೂ ಗುರುತಿಸುತ್ತಾರೆ. ೩೦

ಟಿಪ್ಪಣಿ—ಅಧಿಭೂತಾದಿಗಳ ಅರ್ಥವು ಎಂಟನೆಯ ಅಧ್ಯಾಯದಲ್ಲಿ ಬರುತ್ತದೆ. ಈ ಶ್ಲೋಕದ ತಾತ್ಪರ್ಯವೇನೆಂದರೆ: ಈ ಪ್ರಪಂಚದಲ್ಲಿ ಈಶ್ವರನನ್ನುಳಿದು ಇನ್ನೇನೂ ಇಲ್ಲ, ಮತ್ತು ಸಮಸ್ತ ಕರ್ಮಗಳನ್ನೂ ಮಾಡುವವನೂ ಭೋಗಿಸುವವನೂ ಅವನು, ಎಂದು ತಿಳಿದುಕೊಂಡು ಮರಣ ಕಾಲದಲ್ಲಿ ಶಾಂತನಾಗಿದ್ದು ಈಶ್ವರನಲ್ಲೇ ತನ್ಮಯನಾಗಿದ್ದು, ಆ ಕಾಲದಲ್ಲಿ ಯಾವ [ವಿಷಯ] ವಾಸನೆಯೂ ಯಾರಿಗೆ ಉಂಟಾಗುವದಿಲ್ಲವೊ ಅವನು ಈಶ್ವರನನ್ನರಿತಿದ್ದಾನೆ. ಮತ್ತು ಅವನು ಮೋಕ್ಷವನ್ನೈದಿದ್ದಾನೆ.

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಜ್ಞಾನವಿಜ್ಞಾನಯೋಗನೆಂಬ ಏಳನೆಯ ಅಧ್ಯಾಯವು ಸಮಾಪ್ತವಾದುದು.



೮

# ಅಕ್ಷರಬ್ರಹ್ಮಯೋಗ

ಈ ಅಧ್ಯಾಯದಲ್ಲಿ ಈಶ್ವರತತ್ವವು ವಿಶೇಷ ರೂಪದಿಂದ ವಿಶದಗೊಳಿಸಲ್ಪಟ್ಟಿದೆ.

ಅರ್ಜುನ ಉವಾಚ—

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ
ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ

ಅರ್ಜುನನು ಹೇಳಿದನು—

ಹೇ ಪುರುಷೋತ್ತಮ, ಈ ಬ್ರಹ್ಮಸ್ವರೂಪವೇನು ? ಅಧ್ಯಾತ್ಮವೆಂದರೇನು ? ಕರ್ಮವೆಂದರೇನು ? ಯಾವದನ್ನು ಅಧಿಭೂತವೆಂದು ಕರೆಯುತ್ತಾರೆ ? ಅಧಿದೈವವೆಂದು ಕರೆಸಿಕೊಳ್ಳುವದು ಯಾವದು ? ೧

ಅಧಿಯಜ್ಞಃ ಕಥಂ ಕೋತ್ರ ದೇಹೇಸ್ಮಿನ್ಮಧುಸೂದನ
ಪ್ರಯಾಣಕಾಲೇ ಚ ಕಥಂ ಜ್ಞೇಯೋಸಿ ನಿಯತಾತ್ಮಭಿಃ

ಹೇ ಮಧುಸೂದನ, ಈ ದೇಹದಲ್ಲಿ ಅಧಿಯಜ್ಞವೆಂದರೇನು ಮತ್ತು ಅದು ಯಾವ ರೀತಿಯದು? ಮತ್ತು ಸಂಯಮಿಗಳು ನಿನ್ನನ್ನು ಮೃತ್ಯುಸಮಯದಲ್ಲಿ ಗುರುತಿಸಬಲ್ಲ ಬಗೆಯೆಂತು? ೨

ಶ್ರೀ ಭಗವಾನುವಾಚ—

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಧ್ಯಾತ್ಮಮುಚ್ಯತೇ**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ**

ಶ್ರೀ ಭಗವಂತನೆಂದನು—

ಯಾವದು ಸರ್ವೋತ್ತಮವೂ ಅವಿನಾಶಿಯೂ ಆಗಿದೆಯೊ ಅದು ಬ್ರಹ್ಮವು; ಸಕಲ ಪ್ರಾಣಿಗಳಲ್ಲಿಯೂ ಸ್ವಂತ ಅಸ್ತಿತ್ವದಿಂದ ಇರುವದು ಅಧ್ಯಾತ್ಮವು; ಮತ್ತು ಸಕಲ ಪ್ರಾಣಿಗಳನ್ನು ಹುಟ್ಟಿಸುವ ಸೃಷ್ಟಿವ್ಯಾಪಾರವು ಕರ್ಮವೆನಿಸಿಕೊಳ್ಳುತ್ತದೆ. ೩

ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ

ಅಧಿಭೂತವು ನನ್ನ ನಶಿಸಿ ಹೋಗುವ ಸ್ವರೂಪವು, ಅಧಿದೇವತವು ಅದರಲ್ಲಿ ಇರುವ ನನ್ನ ಜೀವಸ್ವರೂಪವು ಮತ್ತು, ಎಲೈ ಮನುಷ್ಯಶ್ರೇಷ್ಠನೆ, ಈ ಶರೀರದಲ್ಲಿದ್ದರೂ ಯಜ್ಞದ ಮೂಲಕ ಶುದ್ಧವಾಗುವ ಜೀವಸ್ವರೂಪವು ಅಧಿಯಜ್ಞವು. ೪

ಟಿಪ್ಪಣಿ—ತಾತ್ಪರ್ಯ: ಅವ್ಯಕ್ತ ಬ್ರಹ್ಮದಿಂದ ಮೊದಲ್ಗೊಂಡು ನಾಶವಂತವಾದ ಸಕಲ ದೃಶ್ಯಪದಾರ್ಥಗಳವರೆಗೂ ಎಲ್ಲವೂ ಪರಮಾತ್ಮನೇ, ಮತ್ತು ಎಲ್ಲ ಆತನ ಕೃತಿಯೇ. ಹಾಗಾದಮೇಲೆ ಮನುಷ್ಯ ಪ್ರಾಣಿಯು ಸ್ವಯಂ ಕರ್ತೃತ್ವದ ಅಭಿಮಾನವನ್ನಿಟ್ಟುಕೊಂಡಿರುವದಕ್ಕೆ ಬದಲಾಗಿ ಪರಮಾತ್ಮನ ದಾಸನಾಗಿ ಎಲ್ಲವನ್ನೂ ಅವನಿಗೆ ಸಮರ್ಪಣೆ ಮಾಡಬಾರದೇಕೆ?

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ

ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಣೆಮಾಡುತ್ತಾ ದೇಹತ್ಯಾಗ ಮಾಡುವವನು ನನ್ನ ಸ್ವರೂಪವನ್ನು ಹೊಂದುತ್ತಾನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ೫

ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ

ಅಥವಾ, ಎಲೈ ಕೌಂತೇಯನೆ, ನಿತ್ಯವೂ ಯಾವ ಯಾವ ಸ್ವರೂಪದ ಧ್ಯಾನವನ್ನು ಮನುಷ್ಯನು ಮಾಡುತ್ತಾನೊ ಅಂತ್ಯಕಾಲ

ದಲ್ಲಿಯೂ ಆ ಆ ಸ್ವರೂಪದ ಸ್ಮರಣೆಯನ್ನೇ ಮಾಡುತ್ತಾ ದೇಹ ವನ್ನು ಬಿಡುತ್ತಾನೆ. ಇದರಿಂದ ಅವನು ಆ ಸ್ವರೂಪವನ್ನು ಪಡೆಯು ತ್ತಾನೆ. ೬

ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ
ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ

ಆದುದರಿಂದ ಸದಾ ನನ್ನ ಸ್ಮರಣೆಯನ್ನು ಮಾಡು ಮತ್ತು ಕದನವಾಡುತ್ತಿರು. ಈ ಪ್ರಕಾರ ನನ್ನಲ್ಲಿ ಮನಸ್ಸನ್ನೂ ಬುದ್ಧಿ ಯನ್ನೂ ಇಡುವದರಿಂದ ಅವಶ್ಯವಾಗಿ ನನ್ನನ್ನೈದುವೆ. ೭

ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್

ಎಲೈ ಪಾರ್ಥನೆ, ಚಿತ್ತವನ್ನು ಅಭ್ಯಾಸದಿಂದ ಸ್ಥಿರಗೊಳಿಸಿ ಬೇರೆ ಎಲ್ಲಿಯೂ ಓಡಲು ಬಿಡದೆ ಏಕಧ್ಯಾನದಲ್ಲಿರುವವನು ದಿವ್ಯ ಪರಮಪುರುಷನನ್ನೈದುತ್ತಾನೆ. ೮

ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ
ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್
ಪ್ರಯಾಣಕಾಲೇ ಮನಸಾಚಲೇನ ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ
ಪುರುಷಮುಪೈತಿ ದಿವ್ಯಂ

ಯಾವ ಮನುಷ್ಯನು ಮೃತ್ಯುಸಮಯದಲ್ಲಿ ಅಚಲವಾದ ಮನ ಸ್ಸಿನಿಂದ, ಭಕ್ತಿಯುತನಾಗಿ, ಮತ್ತು ಯೋಗಬಲದಿಂದ ಹುಬ್ಬಿನ ನಡುವೆ ಒಳ್ಳೆಯ ರೀತಿಯಲ್ಲಿ ಪ್ರಾಣವನ್ನು ಸ್ಥಾಪಿಸಿ, ಸರ್ವಜ್ಞನೂ, ಪುರಾತನನೂ, ನಿಯಮಗ್ಯೆವನೂ, ಅತ್ಯಂತ ಸೂಕ್ಷ್ಮನೂ, ಎಲ್ಲ ರನ್ನೂ ಪಾಲಿಸುವವನೂ, ಅಚಿಂತ್ಯನೂ, ಸೂರ್ಯಸಮಾನವಾದ ತೇಜಸ್ಸುಳ್ಳವನೂ, ಅಜ್ಞಾನವೆಂಬ ಕತ್ತಲಿಗೆ ಪರಸ್ವರೂಪನೂ [ಆದ ವನನ್ನು] ಸ್ಮರಿಸುತ್ತಾನೊ ಅವನು ಆ ಪರಮಪುರುಷನನ್ನು ಪಡೆ ಯುತ್ತಾನೆ. ೯, ೧೦

ಯದಕ್ಷರಂ ವೇದವಿದೋ ವದಂತಿ ವಿಶಂತಿ ಯದ್ಯತಯೋ ವೀತರಾಗಾಃ
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ
ಪ್ರವಕ್ಷ್ಯೇ

ಯಾವದನ್ನು ವೇದವನ್ನರಿತವರು ಅಕ್ಷರವೆಂಬ ಹೆಸರಿನಿಂದ ವರ್ಣಿಸುತ್ತಾರೊ, ಯಾವದರಲ್ಲಿ ವೀತರಾಗಿಗಳಾದ ಮುನಿಗಳು ಪ್ರವೇಶಗೈಯುತ್ತಾರೊ, ಮತ್ತು ಯಾವದರ ಪ್ರಾಪ್ತಿಯ ಇಚ್ಛೆಯಿಂದ ಜನರು ಬ್ರಹ್ಮಚರ್ಯೆಯನ್ನು ಪಾಲಿಸುತ್ತಾರೊ, ಆ ಪದವನ್ನು ನಾನು ನಿನಗೆ ಸಂಕ್ಷೇಪವಾಗಿ ವರ್ಣಿಸುವೆನು. ೧೧

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ
ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್
ಯಃ ಪ್ರಯಾತಿ ತ್ಯಜನ್ದೇಹಂ ಸಯಾತಿ ಪರಮಾಂ ಗತಿಂ

ಇಂದ್ರಿಯಗಳ ಬಾಗಿಲುಗಳೆಲ್ಲವನ್ನೂ ತಡೆದು, ಮನಸ್ಸನ್ನು ಹೃದಯದಲ್ಲ ಸ್ಥಿರವಾಗಿಟ್ಟು, ಮಸ್ತಕದಲ್ಲ ಪ್ರಾಣವನ್ನು ಧಾರಣೆ ಮಾಡಿ, ಸಮಾಧಿಸ್ಥನಾಗಿ ಓಂ ಎಂಬಂತಹ ಏಕಾಕ್ಷರ ಬ್ರಹ್ಮವನ್ನುಚ್ಚರಿಸುತ್ತಾ, ನನ್ನ ಚಿಂತನೆಯನ್ನು ಮಾಡುತ್ತಾ, ದೇಹವನ್ನು ತ್ಯಜಿಸುವ ಮನುಷ್ಯನು ಪರಮಗತಿಯನ್ನೈದುತ್ತಾನೆ.
೧೨, ೧೩

ಅನನ್ಯ ಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ

ಎಲೈ ಪಾರ್ಥನೆ, ಚಿತ್ತವನ್ನು ಬೇರೆ ಎಲ್ಲಿಯೂ ಇಡದೆ ನಿತ್ಯವೂ ನಿರಂತರವೂ ನನ್ನನ್ನೇ ಸ್ಮರಿಸುತ್ತಾ ಇರುವ ನಿತ್ಯಯುಕ್ತನಾದ ಯೋಗಿಯು ನನ್ನನ್ನು ಸಹಜವಾಗಿ ಪಡೆಯುತ್ತಾನೆ. ೧೪

ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ

ನನ್ನನ್ನೈದಿ ಪರಮಗತಿಯನ್ನು ಪಡೆದ ಮಹಾತ್ಮರು ದುಃಖದ ಮನೆಯಂತಹ ಅಶಾಶ್ವತವಾದ ಪುನರ್ಜನ್ಮವನ್ನು ಹೊಂದುವದಿಲ್ಲ. ೧೫

ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ

ಎಲೈ ಕೌಂತೇಯನೆ, ಬ್ರಹ್ಮಲೋಕದಿಂದ ಹಿಡಿದು ಎಲ್ಲಾ ಲೋಕಗಳು ತಿರುಗಿತಿರುಗಿ ಬರುವಂತಹವಾಗಿರುತ್ತವೆ. ಆದರೆ ನನ್ನನ್ನೈದಿದ ಮೇಲೆ ಮನುಷ್ಯನು ಪುನಃ ಜನ್ಮವೆತ್ತಬೇಕಾಗುವದಿಲ್ಲ. ೧೬

ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ

ಸಾವಿರ ಯುಗದವರೆಗೆ ಬ್ರಹ್ಮನಿಗೆ ಒಂದು ದಿನ ಮತ್ತು ಸಾವಿರ ಯುಗದವರೆಗೆ ಬ್ರಹ್ಮನಿಗೆ ಒಂದು ಇರುಳು ಎಂಬುದನ್ನರಿತವರು ರಾತ್ರಿಹಗಲನ್ನು ತಿಳಿದವರಾಗಿದ್ದಾರೆ. ೧೭

**ಟಿಪ್ಪಣಿ**—ತಾತ್ಪರ್ಯ: ನಮ್ಮ ಇಪ್ಪತ್ತುನಾಲ್ಕು ತಾಸಿನ ಹಗಲಿರುಳು ಕಾಲಚಕ್ರದೊಳಗಿನ ಒಂದು ಕ್ಷಣಕ್ಕಿಂತಲೂ ಸೂಕ್ಷ್ಮವಾಗಿದೆ. ಅದಕ್ಕೆ ಯಾವ ಬೆಲೆಯೂ ಇಲ್ಲ. ಇದರಿಂದ ಅಷ್ಟು ಕಾಲದಲ್ಲೊದಗುವ ಭೋಗಗಳು ಆಕಾಶಪುಷ್ಪದಂತಿವೆಯೆಂಬುದನ್ನು ತಿಳಿದುಕೊಂಡು ನಾವು ಅವುಗಳ ಕಡೆ ಉದಾಸೀನರಾಗಿರಬೇಕು, ಮತ್ತು ನಮಗಿರುವಷ್ಟು ಹೊತ್ತನ್ನೇ ಭಗವದ್ಭಕ್ತಿಯಲ್ಲಿ, ಸೇವಾಕಾರ್ಯದಲ್ಲಿ ಕಳೆದು ಸಾರ್ಥಕಗೊಳಿಸಬೇಕು; ಮತ್ತು ಇದೇ ದಿನ ಆತ ದರ್ಶನವಾಗದಿದ್ದರೆ ತಾಳ್ಮೆಯಿಂದಿರಬೇಕು.

ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ

ಬ್ರಹ್ಮನ ದಿನವು ಆರಂಭವಾದಮೇಲೆ ಎಲ್ಲವೂ ಅವ್ಯಕ್ತದೊಳಗಿಂದ ವ್ಯಕ್ತವಾಗುತ್ತದೆ; ಮತ್ತು ರಾತ್ರಿಯಾದ ಮೇಲೆ ಅದರ ಪ್ರಳಯವಾಗುತ್ತದೆ, ಎಂದರೆ ಅವ್ಯಕ್ತದಲ್ಲಿ ಲಯವಾಗಿಹೋಗುತ್ತದೆ. ೧೮

ಟಿಪ್ಪಣಿ— ಇದನ್ನು ತಿಳಿದುಕೊಂಡಮೇಲೆ ಕೂಡ ಮನುಷ್ಯನು ತನ್ನ ಕೈಯಲ್ಲಿರುವ ಬಲವು ಅತ್ಯಲ್ಪವೆಂಬುವನ್ನರಿತುಕೊಳ್ಳಬೇಕು. ಉತ್ಪತ್ತಿಯ ಮತ್ತು ನಾಶದ ಜೋಡಿಯು ಒಟ್ಟಿಗೆ ಚಲಿಸುತ್ತಲೇ ಇರುತ್ತದೆ.

ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ

ಹೇ ಪಾರ್ಥ, ಈ ಪ್ರಾಣಿಗಳ ಸಮುದಾಯವು ಈ ರೀತಿಯಾಗಿ ಹುಟ್ಟಿ, ರಾತ್ರಿಯಾಗುತ್ತಲು ವಿವಶವಾಗಿ ಲಯವನ್ನೈದುತ್ತದೆ; ಮತ್ತು ದಿನವು ಮೂಡುತ್ತಲು ಉತ್ಪನ್ನವಾತ್ತದೆ. ೧೯

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ

ಈ ಅವ್ಯಕ್ತದಿಂದಾಚೆಗೆ ಇನ್ನೊಂದು ಸನಾತನ ಅವ್ಯಕ್ತಭಾವವಿದೆ. ಸಮಸ್ತ ಪ್ರಾಣಿಗಳು ನಾಶವಾದರೂ ಈ ಸನಾತನ ಅವ್ಯಕ್ತ ಭಾವವು ಅಳಿಯುವದಿಲ್ಲ. ೨೦

ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ

ಯಾವ ಅವ್ಯಕ್ತವನ್ನು ಅವ್ಯಯ (ಅವಿನಾಶಿ) ವೆಂದು ಕರೆಯುತ್ತಾರೊ ಅದಕ್ಕೇ ಪರಮಗತಿಯೆಂದು ಹೆಸರು ಯಾವದನ್ನು ಹೊಂದಿದ ಮೇಲೆ ಜನರಿಗೆ ಪುನರ್ಜನ್ಮವಾಗುವದಿಲ್ಲವೊ ಅದು ನನ್ನ ಪರಮ ಧಾಮವು. ೨೧

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ

ಎಲೈ ಪಾರ್ಥನೆ, ಈ ಉತ್ತಮ ಪುರುಷನ ದರ್ಶನಗಳು ಅನನ್ಯ ಭಕ್ತಿಯಿಂದ ಉಂಟಾಗುತ್ತವೆ. ಇದರಲ್ಲಿ ಸಕಲ ಭೂತಗಳೂ ಸ್ಥಿತವಾಗಿವೆ ಮತ್ತು ಇದೆಲ್ಲವೂ ಅವರಿಂದಲೇ ವ್ಯಾಪ್ತವಾಗಿದೆ. ೨೨

ಯತ್ರಕಾಲೇ ತ್ವನಾವರ್ತಿಮಾವೃತ್ತಿಂ ಚೈವ ಯೋಗಿನಃ
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ

ಯಾವ ಕಾಲದಲ್ಲಿ ಮೃತ್ಯುವನ್ನು ಹೊಂದಿದರೆ ಯೋಗಿಗಳು ಮೋಕ್ಷವನ್ನೈದುತ್ತಾರೆಯೊ ಮತ್ತು ಯಾವ ಕಾಲದಲ್ಲಿ ಮೃತ್ಯುವನ್ನು ಹೊಂದಿದರೆ ಅವರಿಗೆ ಪುನರ್ಜನ್ಮವುಂಟಾಗುತ್ತದೆಯೊ ಆ ಕಾಲವನ್ನು, ಹೇ ಭರತರ್ಷಭ, ನಾನು ನಿನಗೆ ತಿಳಿಸುವೆನು. ೨೩

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ

ಉತ್ತರಾಯಣದ ಆರು ತಿಂಗಳುಗಳಲ್ಲಿ ಶುಕ್ಲ ಪಕ್ಷದಲ್ಲಿ, ಹಗಲು ಹೊತ್ತಿನಲ್ಲಿ, ಅಗ್ನಿಯ ಜ್ವಾಲೆಯು ಚಲಿಸುತ್ತಿರುವಾಗ, ಮೃತ್ಯು ಹೊಂದಿದ ಬ್ರಹ್ಮಜ್ಞಾನಿಯು ಬ್ರಹ್ಮವನ್ನು ಪಡೆಯುತ್ತಾನೆ. ೨೪

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ

ದಕ್ಷಿಣಾಯನದ ಆರು ತಿಂಗಳುಗಳಲ್ಲಿ, ಕೃಷ್ಣಪಕ್ಷದಲ್ಲಿ, ರಾತ್ರಿಯಲ್ಲಿ ಧೂಳೆದ್ದಿರುವಾಗ ಮರಣವಾಗುವವನು ಚಂದ್ರಲೋಕವನ್ನೈದಿ ಪುನರ್ಜನ್ಮಹೊಂದುತ್ತಾನೆ. ೨೫

ಟಿಪ್ಪಣಿ—ಮೇಲಿನ ಎರಡು ಶ್ಲೋಕಗಳು ನನಗೆ ಪೂರ್ತಿ ಅರ್ಥವಾಗುವದಿಲ್ಲ. ಅದರ ಶಬ್ದಾರ್ಥವು ಗೀತೆಯ ಬೋಧೆಯೊಡನೆ ಹೊಂದುವದಿಲ್ಲ. ಅದರ ಬೋಧೆಗನುಸಾರವಾಗಿಯಾದರೊ ಯಾರು ಭಕ್ತಿವಂತನೊ, ಯಾರು ಸೇವಾಮಾರ್ಗವನ್ನವಲಂಬಿಸುತ್ತಾನೊ, ಯಾರಿಗೆ ಜ್ಞಾನವುಂಟಾಗಿದೆಯೊ, ಅವನು ಯಾವಾಗ ಮೃತಿ ಹೊಂದಿದರೂ ಅವನಿಗೆ ಮೋಕ್ಷವೇ [ದೊರಕುತ್ತದೆ]. ಈ ಶ್ಲೋಕಗಳ ಶಬ್ದಾರ್ಥವು ಇದಕ್ಕೆ ವಿರುದ್ಧವಾಗಿದೆ ಅವಶ್ಯವಾಗಿ ಹೀಗೆ ಅದರ ಭಾವಾರ್ಥವನ್ನಿಳಿಸಬಹುದು—ಯಾರು ಯಜ್ಞಮಾಡುತ್ತಾನೊ, ಎಂದರೆ ಯಾರು ಪರೋಪಕಾರದಲ್ಲಿಯೇ ಜೀವನವನ್ನು ಕಳೆಯುತ್ತಾನೊ, ಯಾರಿಗೆ ಜ್ಞಾನವುಂಟಾಗಿದೆಯೊ, ಯಾರು ಬ್ರಹ್ಮವಿದನೊ, ಎಂದರೆ ಜ್ಞಾನಿಯೊ, ಅವನು, ಮರಣಕಾಲದಲ್ಲಿ ಕೂಡ ಅವನ ಸ್ಥಿತಿಯು ಹೀಗಿದ್ದರೆ, ಮೋಕ್ಷವನ್ನು ಪಡೆಯುತ್ತಾನೆ ಇದಕ್ಕೆದಿರಾಗಿ,

ಯಾರು ಯಜ್ಞ ಮಾಡುವದಿಲ್ಲವೊ, ಯಾರಿಗೆ ಜ್ಞಾನವಿಲ್ಲವೊ, ಯಾರು ಭಕ್ತಿಯನ್ನರಿಯನೊ, ಅವನು ಚಂದ್ರಲೋಕವನ್ನು ಎಂದರೆ ಕ್ಷಣಿಕ ಲೋಕವನ್ನು ಪಡೆದು ಪುನಃ ಭವಚಕ್ರಕ್ಕೆ ಹಿಂತಿರುಗಿ ಬರುತ್ತಾನೆ. ಚಂದ್ರನಿಗೆ ಸ್ವಂತ ಬೆಳಕು ಇಲ್ಲ.

ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇಮತೇ
ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ

ಪ್ರಪಂಚದಲ್ಲಿ ಇವೆರಡು ಜ್ಞಾನ ಮತ್ತು ಅಜ್ಞಾನದ, ಪುರಾತನ ಕಾಲದಿಂದ ನಡೆದುಬಂದ, ಮಾರ್ಗಗಳೆಂದೆಣಿಸಲ್ಪಟ್ಟವೆ. ಒಂದರಲ್ಲಿ, ಎಂದರೆ ಜ್ಞಾನಮಾರ್ಗದಲ್ಲಿ, ಮನುಷ್ಯನು ಮೋಕ್ಷವನ್ನು ಪಡೆಯುತ್ತಾನೆ ; ಇನ್ನೊಂದರಲ್ಲಿ, ಎಂದರೆ ಅಜ್ಞಾನಮಾರ್ಗದಲ್ಲಿ, ಅವನಿಗೆ ಪುನರ್ಜನ್ಮವು ಪ್ರಾಪ್ತವಾಗುತ್ತದೆ. ೨೬

ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನ
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ

ಎಲೈ ಪಾರ್ಥನೆ, ಇವೆರಡು ಮಾರ್ಗಗಳನ್ನರಿತ ಯಾವ ಯೋಗಿಯೂ ಮೋಹದಲ್ಲಿ ಬೀಳುವದಿಲ್ಲ ಆದುದರಿಂದ, ಹೇ ಅರ್ಜುನ, ನೀನು ಎಲ್ಲಾ ಕಾಲದಲ್ಲಿಯೂ ಯೋಗಯುಕ್ತನಾಗಿರಬೇಕು. ೨೭

ಟಿಪ್ಪಣಿ—ಎರಡು ಮಾರ್ಗವನ್ನೂ ಅರಿತವನು ಮತ್ತು ಸಮಭಾವವನ್ನಿಟ್ಟಿರುವವನು ಅಂಧಕಾರದ—ಅಜ್ಞಾನದ—ಮಾರ್ಗವನ್ನು ಹಿಡಿಯುವದಿಲ್ಲ. ಇದಕ್ಕೇ ಮೋಹದಲ್ಲಿ ಬೀಳದಿರುವದೆಂದು ಹೆಸರು.

ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ

ಈ ವಿಷಯವನ್ನು ತಿಳಿದುಕೊಂಡಮೇಲೆ ವೇದದಲ್ಲಿ, ಯಜ್ಞದಲ್ಲಿ, ತಪಸ್ಸಿನಲ್ಲಿ ಮತ್ತು ದಾನದಲ್ಲಿ ತೋರಿಸಲ್ಪಟ್ಟಿರುವ ಪುಣ್ಯಫಲವೆಲ್ಲವನ್ನೂ ದಾಟಿ ಯೋಗಿಯು ಉತ್ತಮ ಆದಿಸ್ಥಾನವನ್ನೈದುತ್ತಾನೆ. ೨೮

ಟಿಪ್ಪಣಿ—ಎಂದರೆ, ಯಾರು ಜ್ಞಾನ, ಭಕ್ತಿ ಮತ್ತು ಸೇವಾಕರ್ಮ, ಇವುಗಳಿಂದ ಸಮಭಾವವನ್ನು ಗಳಿಸಿದ್ದಾನೊ ಅವನಿಗೆ ಕೇವಲ ಎಲ್ಲಾ ಪುಣ್ಯಗಳ ಫಲವಷ್ಟೇ ದೊರಕುವದಲ್ಲದೆ ಪರಮ ಮೋಕ್ಷಪದವು ಕೂಡ ಲಭಿಸುತ್ತದೆ.

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಅಕ್ಷರಬ್ರಹ್ಮ ಯೋಗವೆಂಬ ಎಂಟನೆಯ ಅಧ್ಯಾಯವು ಸಮಾಪ್ತವಾದುದು.



# ರಾಜವಿದ್ಯಾರಾಜಗುಹ್ಯಯೋಗ



ಇದರಲ್ಲಿ ಭಕ್ತಿಯ ಮಹಿಮೆಯನ್ನು ಹಾಡಿದ್ದಾರೆ.

ಶ್ರೀ ಭಗವಾನುವಾಚ—

ಇದಂತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್

ಶ್ರೀ ಭಗವಂತನೆಂದನು—

ನೀನು ದ್ವೇಷರಹಿತನಾದುದರಿಂದ ನಿನಗೆ ನಾನು ಅತ್ಯಂತ ಗೂಢವಾದ, ಅನುಭವಯುಕ್ತವಾದ ಜ್ಞಾನವನ್ನು ಕೊಡುವೆನು. ಆ ಜ್ಞಾನವನ್ನರಿತು ನೀನು ಅಕಲ್ಯಾಣದಿಂದ ಪಾರಾಗುವೆ ೧

ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ

ವಿದ್ಯೆಗಳಲ್ಲಿ ಇದು ರಾಜನು; ಗೂಢವಸ್ತುಗಳಲ್ಲಿಯೂ [ ಇದು ] ರಾಜನು. ಈ ವಿದ್ಯೆಯು ಪವಿತ್ರವಾದುದು, ಉತ್ತಮವಾದುದು, ಪ್ರತ್ಯಕ್ಷ ಅನುಭವಕ್ಕೆ ಬರಲು ಯೋಗ್ಯವಾದುದು, ಧಾರ್ಮಿಕವಾದುದು, ಆಚಾರದಲ್ಲಿ ತರಲು ಸಹಜವಾದುದು ಮತ್ತು ಅವಿನಾಶಿಯಾದುದು. ೨

ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ

ಎಲೈ ಪರಂತಪನೆ, ಈ ಧರ್ಮದಲ್ಲಿ ಶ್ರದ್ಧೆಯಿಲ್ಲದಂತಹರು ನನ್ನನ್ನು ಪಡೆಯದೆ ಮೃತ್ಯುಮಯವಾದ ಸಂಸಾರ ಮಾರ್ಗದಲ್ಲಿ [ಬಿದ್ದು] ಬಾರಿ ಬಾರಿಗೂ ದಾರಿ ತಪ್ಪುತ್ತಾರೆ. ೩

ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ

ನನ್ನ ಅವ್ಯಕ್ತ ಸ್ವರೂಪದಿಂದ ಈ ಇಡೀ ಜಗತ್ತು ತುಂಬಿದೆ. ನನ್ನಲ್ಲಿ—ನನ್ನ ಆಧಾರದಮೇಲೆ—ಸಮಸ್ತ ಪ್ರಾಣಿಗಳೂ ಇವೆ; ನಾನು ಅವುಗಳ ಆಧಾರದ ಮೇಲೆ ಇಲ್ಲ. ೪

ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ

ಹಾಗಾದರೂ ನನ್ನಲ್ಲಿ ಪ್ರಾಣಿಗಳು ಇಲ್ಲವೆಂದೂ ಹೇಳಬಹುದು. ಈ ನನ್ನ ಯೋಗಬಲವನ್ನು ನೀನು ನೋಡು. ನಾನು ಜೀವಗಳನ್ನು ಪಾಲಿಸುವವನಾಗಿದ್ದರೂ ಅವುಗಳಲ್ಲಿಲ್ಲ. ಆದರೆ ನಾನು ಅವುಗಳ ಉತ್ಪತ್ತಿಕಾರಣನು. ೫

ಟಿಪ್ಪಣಿ—ನನ್ನಲ್ಲಿ ಸಮಸ್ತ ಜೀವಗಳೂ ಇವೆ ಮತ್ತು ಇಲ್ಲ; ಅವುಗಳಲ್ಲಿ ನಾನು ಇದ್ದೇನೆ ಮತ್ತು ಇಲ್ಲ. ಇದು ಈಶ್ವರನ ಯೋಗಬಲವು, ಅವನ ಮಾಯೆಯು, ಅವನ ಚಮತ್ಕಾರವು ಈಶ್ವರನ ವರ್ಣನೆಯನ್ನು ಭಗವಂತನು ಕೂಡ ಮನುಷ್ಯನ ಭಾಷೆಯಲ್ಲಿಯೇ ಮಾಡಬೇಕಾಗುವುದು; ಆದುದರಿಂದ ಅನೇಕ ಪ್ರಕಾರದ ಭಾಷಾಪ್ರಯೋಗಮಾಡಿ ಅವನಿಗೆ ಸಂತಸಪಡಿಸುತ್ತಾರೆ. ಎಲ್ಲವೂ ಈಶ್ವರನಮಯವು. ಆದುದರಿಂದ ಎಲ್ಲವೂ ಅವನಲ್ಲಿದೆ. ಅವನು ಅಲಿಪ್ತನು. ಪ್ರಾಕೃತನಲ್ಲ. ಆದುದರಿಂದ ಅವನಲ್ಲಿ ಜೀವವಿಲ್ಲವೆಂದು ಹೇಳಬಹುದು. ಆದರೆ ಯಾರು ಅವನ ಭಕ್ತರೊ ಅವರಲ್ಲಿ ಅವನು ಅವಶ್ಯವಾಗಿ ಇದ್ದಾನೆ. ಯಾರು ನಾಸ್ತಿಕನೊ ಅವನಲ್ಲಿ ಅವನ ದೃಷ್ಟಿಯಿಂದಲಂತು ಅವನು ಇಲ್ಲ, ಮತ್ತು ಇದು ಅವನ ಚಮತ್ಕಾರವಲ್ಲದಿದ್ದರೆ ಇನ್ನೇನು ಹೇಳಬೇಕು ?

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ**

ಎಲ್ಲಾ ಕಡೆಯೂ ಸಂಚರಿಸುತ್ತಾ [ಇದ್ದರೂ] ಮಹಾವಾಯುವು ಸದಾ ಆಕಾಶದಲ್ಲಿ ಇದ್ದೇ ಇರುವಂತೆ ಎಲ್ಲಾ ಪ್ರಾಣಿಗಳು ನನ್ನಲ್ಲಿವೆಯೆಂದು ತಿಳಿ. ೬

ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ

ಹೇ ಕೌಂತೇಯ, ಸಮಸ್ತ ಪ್ರಾಣಿಗಳೂ ಕಲ್ಪದ ಕೊನೆಯಲ್ಲಿ ನನ್ನ ಪ್ರಕೃತಿಯಲ್ಲಿ ಲಯವನ್ನೈದುತ್ತವೆ, ಮತ್ತು ಕಲ್ಪದ ಆರಂಭವಾಗುತ್ತಲು ನಾನು ಅವುಗಳನ್ನು ಪುನಃ ರಚಿಸುತ್ತೇನೆ ೭

ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ .

ನನ್ನ ಮಾಯೆಯ ಆಧಾರದಿಂದ ನಾನು ಪ್ರಕೃತಿಯ ಪ್ರಭಾವಕ್ಕೆ ಅಧೀನವಾಗಿರುವ ಪ್ರಾಣಿಗಳ ಸಮುದಾಯಗಳೆಲ್ಲವನ್ನೂ ಬಾರಿಬಾರಿಗೂ ಸೃಷ್ಟಿಸುತ್ತೇನೆ. ೮

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು

ಎಲೈ ಧನಂಜಯನೆ, ಈ ಕರ್ಮಗಳು ನನ್ನನ್ನು ಬಂಧಿಸುವದಿಲ್ಲ; ಏಕೆಂದರೆ ನಾನು ಅವುಗಳನ್ನು ಕುರಿತು ಉದಾಸೀನನಂತೆಯೂ ಆಸಕ್ತಿಯಿಲ್ಲದವನಾಗಿಯೂ ವರ್ತಿಸುತ್ತೇನೆ. ೯

ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ
ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ

ನನ್ನ ಅಧಿಕಾರಕ್ಕೊಳಪಟ್ಟು ಪ್ರಕೃತಿಯು ಸ್ಥಾವರ ಮತ್ತು ಜಂಗಮ ಜಗತ್ತನ್ನು ಸೃಷ್ಟಿಸುತ್ತದೆ. ಮತ್ತು ಈ ಕಾರಣದಿಂದ ಜಗತ್ತು ಘಟಮಾಲೆಯಂತೆ ಸುತ್ತುತ್ತಿರುತ್ತದೆ. ೧೦

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ

ಸಕಲ ಪ್ರಾಣಿಗಳ ಮಹೇಶ್ವರರೂಪನಾದ ನನ್ನ ಭಾವವನ್ನರಿಯದೆ ಮೂರ್ಖಜನರು ಮನುಷ್ಯದೇಹಧಾರಿಯಾದ ನನಗೆ ಅವಮಾನಗೈಯುತ್ತಾರೆ. ೧೧

ಟಿಪ್ಪಣಿ—ಏಕೆಂದರೆ ಈಶ್ವರನ ಪ್ರಭಾವವನ್ನರಿಯದ ಜನರು ಶರೀರಸ್ಥಿತ ಅಂತರ್ಯಾಮಿಯನ್ನು ಗುರುತಿಸುವದಿಲ್ಲ, ಮತ್ತು ಅವನ ಅಸ್ಥಿತ್ವವನ್ನೆಣಿಸದ ಜಡವಾದಿಗಳಾಗಿರುತ್ತಾರೆ.

ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ

ವ್ಯರ್ಥವಾಗಿ ಆಸೆಪಡುವ, ವ್ಯರ್ಥವಾಗಿ ಕೆಲಸ ಮಾಡುವ, ಮತ್ತು ವ್ಯರ್ಥವಾದ ಜ್ಞಾನವುಳ್ಳ ಮೂಢ ಜನರು ಮೋಹದಲ್ಲಿ ಬೀಳಿಸಿ ಇಟ್ಟುಕೊಳ್ಳುವ ರಾಕ್ಷಸೀ ಅಥವಾ ಆಸುರೀ ಪ್ರಕೃತಿಯನ್ನು ಆಶ್ರಯಿಸುತ್ತಾರೆ ೧೨

ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ

ಇದಕ್ಕಿದಿರಾಗಿ, ಎಲೈ ಪಾರ್ಥನೆ, ಮಹಾತ್ಮರು ದೈವೀಪ್ರಕೃತಿಯನ್ನಾಶ್ರಯಿಸಿ ಸಕಲ ಪ್ರಾಣಿಗಳ ಆದಿಕಾರಣನಾದಂತಹ ಅವಿನಾಶಿಯು ನಾನೆಂದರಿತು [ನನ್ನನ್ನು] ಏಕನಿಷ್ಠೆಯಿಂದ ಭಜಿಸುತ್ತಾರೆ. ೧೩

ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ

ದೃಢನಿಶ್ಚಯರೂ, ಪ್ರಯತ್ನ ಮಾಡುವವರೂ ಆದ ಅವರು ನಿರಂತರವೂ ನನ್ನ ಕೀರ್ತನೆಯನ್ನು ಮಾಡುತ್ತಾರೆ, ನನಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತಾರೆ ಮತ್ತು ನಿತ್ಯವೂ ಧ್ಯಾನದಲ್ಲಿ ಮಗ್ನರಾಗಿ ನನ್ನ ಉಪಾಸನೆಯನ್ನು ಮಾಡುತ್ತಾರೆ. ೧೪

ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ

ಮತ್ತು ಇತರರು ಅದ್ವೈತರೂಪದಿಂದ ಅಥವಾ ದ್ವೈತ ರೂಪದಿಂದ ಅಥವಾ ಬಹುರೂಪದಿಂದ ಎಲ್ಲ ಕಡೆಯೂ ಇರುವ ನನ್ನನ್ನು ಜ್ಞಾನದ ಮೂಲಕ ಪೂಜಿಸುತ್ತಾರೆ. ೧೫

ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಂ
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಂ

ಯಜ್ಞದ ಸಂಕಲ್ಪವು ನಾನು, ಯಜ್ಞವು ನಾನು, ಯಜ್ಞದ ಮುಖಾಂತರ ಪಿತೃಗಳ ಆಧಾರವು ನಾನು, ಯಜ್ಞದ ವನಸ್ಪತಿಯು ನಾನು, ಮಂತ್ರವು ನಾನು, ಆಹುತಿಯು ನಾನು, ಅಗ್ನಿಯು ನಾನು ಮತ್ತು ಹವನದ್ರವ್ಯವು ನಾನು. ೧೬

ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ
ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ

ಈ ಜಗತ್ತಿನ ತಂದೆಯು ನಾನು, ತಾಯಿಯು ನಾನು, ರಕ್ಷಣೆ ಮಾಡುವವನು ನಾನು, ಪಿತಾಮಹನು ನಾನು, ತಿಳಿದುಕೊಳ್ಳಲು ಯೋಗ್ಯನು ನಾನು, ಪವಿತ್ರ ಓಂ ಕಾರವು ನಾನು, ಋಗ್ವೇದ, ಸಾಮವೇದ ಮತ್ತು ಯಜುರ್ವೇದಗಳೂ ನಾನೇ. ೧೭

ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಂ

ಗತಿಯು ನಾನು, ಪೋಷಕನು ನಾನು, ಪ್ರಭುವು ನಾನು, ಸಾಕ್ಷಿಯು ನಾನು, ನಿವಾಸವು ನಾನು, ಹಿತೈಷಿಯು ನಾನು, ಉತ್ಪತ್ತಿಯು ನಾನು, ನಾಶವು ನಾನು, ಸ್ಥಿತಿಯು ನಾನು, ಭಂಡಾರವು ನಾನು ಮತ್ತು ಅವ್ಯಯ ಬೀಜವು ಕೂಡ ನಾನು. ೧೮

ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ

ಬಿಸಿಲ್ಗರೆಯುವೆನು ನಾನು, ಮಳೆ ಹಿಡಿಯುವೆನು, ಮಳೆ ಕರೆಯುವೆನು ನಾನು, ಅಮರತೆಯು ನಾನು, ಮೃತ್ಯುವು ನಾನು, ಮತ್ತು ಎಲೈ ಅರ್ಜುನನೆ, ಸತ್ ಮತ್ತು ಅಸತ್ ಕೂಡ ನಾನೇ. ೧೯

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ
ಸ್ವರ್ಗತಿಂ ಪ್ರಾರ್ಥಯಂತೇ
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ದಿವಿ
ದೇವಭೋಗಾನ್

ಮೂರು ವೇದದ ಕರ್ಮಗಳನ್ನು ಮಾಡುವವರು, ಸೋಮರಸವನ್ನು ಕುಡಿದು ಪಾಪವಿಲ್ಲದವರಾಗಿ ಯಜ್ಞದ ಮೂಲಕ ನನ್ನನ್ನು ಪೂಜಿಸಿ ಸ್ವರ್ಗವನ್ನು ಯಾಚಿಸುತ್ತಾರೆ. ಅವರು ಪವಿತ್ರ ದೇವಲೋಕವನ್ನು ಪಡೆದು ಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಭೋಗಿಸುತ್ತಾರೆ. ೨೦

ಟಿಪ್ಪಣಿ—ವೈದಿಕ ಕ್ರಿಯೆಗಳೆಲ್ಲವೂ ಫಲಪ್ರಾಪ್ತಿಗಾಗಿ ಮಾಡಲ್ಪಡುತ್ತಿದ್ದುವು ಮತ್ತು ಅವುಗಳೊಳಗಿನ ಕೆಲವು ಕ್ರಿಯೆಗಳಲ್ಲಿ ಸೋಮಪಾನವು ನಡೆಯುತ್ತಿದ್ದಿತು—ಈ ವಿಷಯವು ಇಲ್ಲಿ ಉಲ್ಲೇಖಿತವಾಗಿದೆ. ಈ ಕ್ರಿಯೆಗಳು ಯಾವುವು, ಸೋಮರಸವೆಂದರೇನು, ಎಂಬುದನ್ನು ಇಂದು ಯಾರೂ ಸರಿಯಾಗಿ ವಿಶದಗೊಳಿಸಲಾರರು

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ
ಮರ್ತ್ಯಲೋಕಂ ವಿಶಂತಿ
ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ
ಲಭಂತೇ

ಈ ವಿಶಾಲವಾದ ಸ್ವರ್ಗಲೋಕವನ್ನು ಭೋಗಿಸಿ, ಪುಣ್ಯವು ಕ್ಷಯಿಸಲು ಅವರು ಮೃತ್ಯುಲೋಕಕ್ಕೆ ಹಿಂತಿರುಗಿಬರುತ್ತಾರೆ. ಈ ಪ್ರಕಾರ ಮೂರು ವೇದದ ಕರ್ಮಗಳನ್ನು ಮಾಡುವವರು, ಫಲದ ಇಚ್ಛೆಯನ್ನಿಟ್ಟುಕೊಂಡಿರುವವರ, ಜನ್ಮಮರಣದ ತೊಡಕಿನಲ್ಲಿ ಬೀಳುತ್ತಿರುತ್ತಾರೆ. ೨೧

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ

ಯಾರು ಅನನ್ಯ ಭಾವದಿಂದ ನನ್ನ ಚಿಂತನೆಯನ್ನು ಮಾಡುತ್ತಾ ನನ್ನನ್ನು ಭಜಿಸುತ್ತಾರೊ ಆ ಸದಾ ನನ್ನಲ್ಲಿಯೇ ರತರಾಗಿರುವವರ ಯೋಗಕ್ಷೇಮದ ಭಾರವನ್ನು ನಾನು ಹೊರುತ್ತೇನೆ. ೨೨

ಟಿಪ್ಪಣಿ—ಈ ರೀತಿಯಾಗಿ ಯೋಗಿಯನ್ನು ಗುರುತಿಸಲು ಮೂರು ಸುಂದರ ಲಕ್ಷಣಗಳಿವೆ—ಸಮತೆ, ಕರ್ಮದಲ್ಲಿ ಕುಶಲತೆ, ಅನನ್ಯಭಕ್ತಿ. ಈ ಮೂರೂ ಒಂದರಲ್ಲೊಂದು ಓತಪ್ರೋತವಾಗಿ [ಹಾಸು ಹೊಕ್ಕಿನಂತೆ] ಇರಬೇಕು. ಭಕ್ತಿಯಿಲ್ಲದೆ ಸಮತೆಯು ಲಭಿಸುವದಿಲ್ಲ. ಸಮತೆಯಿಲ್ಲದೆ ಭಕ್ತಿಯು ಲಭಿಸುವದಿಲ್ಲ; ಮತ್ತು ಕರ್ಮಕುಶಲತೆಯಿಲ್ಲದೆ [ಬಂದ] ಭಕ್ತಿ ಮತ್ತು ಸಮತೆಗಳು ಕೇವಲ ತೋರಿಕೆಯವಾಗಿರಬಹುದೆಂಬ ಭಯವುಂಟು. ಯೋಗವೆಂದರೆ ಅಪ್ರಾಪ್ತವಾದ ವಸ್ತುವಿನ ಪ್ರಾಪ್ತಿ; ಕ್ಷೇಮವೆಂದರೆ ಪ್ರಾಪ್ತವಸ್ತುವಿನ ರಕ್ಷಣೆ.

ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ

ಮತ್ತು ಎಲೈ ಕೌಂತೇಯ, ಯಾರು ಶ್ರದ್ಧಾಪೂರ್ವಕವಾಗಿ ಇತರ ದೇವತೆಗಳನ್ನು ಭಜಿಸುತ್ತಾರೊ ಅವರು ಕೂಡ, ವಿಧಿಯಿಲ್ಲದೆ ಹಾಗೆ ಭಜಿಸಿದರೂ, ನನ್ನನ್ನೇ ಭಜಿಸುತ್ತಾರೆ. ೨೩

ಟಿಪ್ಪಣಿ—ವಿಧಿಯಿಲ್ಲದೆ ಎಂದರೆ ಅಜ್ಞಾನದ ಕಾರಣ ನಾನು ಒಬ್ಬನು, ನಿರಂಜನನು, ನಿರಾಕಾರನು ಎಂಬುದನ್ನರಿಯದೆ

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ

ಸಕಲ ಯಜ್ಞಗಳನ್ನು ಭೋಗಿಸುವ ಸ್ವಾಮಿಯು ನಾನೇ. ಇಂತಹನು ನಾನಾಗಿರುವದನ್ನು ಅವರು ನಿಜವಾದ ಸ್ವರೂಪದಿಂದ ಅರಿಯರಾದುದರಿಂದ ಅವರು ಬೀಳುತ್ತಾರೆ. ೨೪

ಯಾಂತಿ ದೇವವ್ರತಾ ದೇವಾನ್ ಪಿತೄನ್ಯಾಂತಿ ಪಿತೃವ್ರತಾಃ
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾ

ದೇವತೆಗಳನ್ನು ಪೂಜಿಸುವವರು ದೇವಲೋಕವನ್ನು ಪಡೆಯುತ್ತಾರೆ; ಪಿತೃಗಳನ್ನು ಪೂಜಿಸುವವರು ಪಿತೃಲೋಕವನ್ನೈದುತ್ತಾರೆ; ಭೂತಪ್ರೇತಾದಿಗಳನ್ನು ಪೂಜಿಸುವವರು ಆ ಲೋಕವನ್ನು ಹೊಂದುತ್ತಾರೆ; ಮತ್ತು ನನ್ನನ್ನು ಭಜಿಸುವವರು ನನ್ನನ್ನು ಪಡೆಯುತ್ತಾರೆ. ೨೫

**ಟಿಪ್ಪಣಿ**— ತಾತ್ಪರ್ಯವೇನೆಂದರೆ, ಈಶ್ವರಪ್ರೀತ್ಯರ್ಥವಾಗಿ ಸೇವಾಭಾವದಿಂದ ಕೊಡುವದೆಲ್ಲವನ್ನೂ ಆಯಾ ಪ್ರಾಣಿಯಲ್ಲಿ ವಾಸಿಸುವ ಅಂತರ್ಯಾಮಿಯ ರೂಪದಿಂದ ಭಗವಂತನೇ ಸ್ವೀಕರಿಸುತ್ತಾನೆ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ

ಎಲೆ, ಹೂವು, ಹಣ್ಣು, ಅಥವಾ ನೀರು ಇದನ್ನು ಯಾರು ನನಗೆ ಭಕ್ತಿಪೂರ್ವಕವಾಗಿ ಅರ್ಪಣಮಾಡುತ್ತಾನೊ ಆ ಪ್ರಯತ್ನಶೀಲ ಮನುಷ್ಯನ ಮೂಲಕ ಭಕ್ತಿಪೂರ್ವಕವಾಗಿ ಅರ್ಪಿತವಾದುದನ್ನು ನಾನು ಸೇವನೆ ಮಾಡುತ್ತೇನೆ. ೨೬

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ

ಆದುದರಿಂದ, ಎಲೈ ಕೌಂತೇಯನೆ, ಮಾಡುವದು, ತಿನ್ನುವದು, ಹವನದಲ್ಲಿ ಹೋಮ ಮಾಡುವದು, ದಾನದಲ್ಲಿ ಕೊಡುವದು, ತಪಸ್ಸು ಮಾಡುವದು, ಇದೆಲ್ಲವನ್ನು ನನಗೆ ಅರ್ಪಿಸಿದ ಮೇಲೆ ಮಾಡಬೇಕು. ೨೭

ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ

ಇದರಿಂದ ನೀನು ಶುಭಾಶುಭ ಫಲವನ್ನೀವ ಕರ್ಮಬಂಧನದಿಂದ ಮುಕ್ತನಾಗುವೆ ಮತ್ತು ಫಲತ್ಯಾಗರೂಪಿಯಾದ ಸಮತೆಯನ್ನು ಹೊಂದಿ, ಹುಟ್ಟುಸಾವಿನಿಂದ ಮುಕ್ತನಾಗಿ ನನ್ನನ್ನು ಪಡೆಯುವೆ. ೨೮

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ

ಎಲ್ಲಾ ಪ್ರಾಣಿಗಳಲ್ಲೂ ನಾನು ಸಮಭಾವದಿಂದ ವಾಸಿಸುತ್ತೇನೆ. ನನಗೆ ಯಾರೂ ಅಪ್ರಿಯನಲ್ಲ, ಪ್ರಿಯನೂ ಅಲ್ಲ. ಯಾರು

ನನ್ನನ್ನು ಭಕ್ತಿಯಿಂದ ಭಜಿಸುವರೊ ಅವರು ನನ್ನಲ್ಲಿದ್ದಾರೆ, ಮತ್ತು ನಾನು ಅವರಲ್ಲಿದ್ದೇನೆ. ೨೯

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ

ಮಹಾದುರಾಚಾರಿಯು ಕೂಡ ಅನನ್ಯಭಾವದಿಂದ ನನ್ನನ್ನು ಭಜಿಸಿದರೆ ಅವನು ಸಾಧುವಾದನೆಂದೇ ಭಾವಿಸಬೇಕು; ಏಕೆಂದರೆ ಈಗ ಅವನಿಗೆ ಒಳ್ಳೆಯ ಸಂಕಲ್ಪವುಂಟು. ೩೦

ಟಿಪ್ಪಣಿ—ಏಕೆಂದರೆ ಅನನ್ಯಭಕ್ತಿಯು ದುರಾಚಾರಿಯನ್ನು ಶಾಂತನನ್ನಾಗಿ ಮಾಡುತ್ತದೆ.

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ

ಇವನು ಶೀಘ್ರದಲ್ಲಿಯೇ ಧರ್ಮಾತ್ಮನಾಗಿಬಿಡುತ್ತಾನೆ ಮತ್ತು ನಿರಂತರ ಶಾಂತಿಯನ್ನು ಪಡೆಯುತ್ತಾನೆ. ಹೇ ಕೌಂತೇಯ, ನನ್ನ ಭಕ್ತನಿಗೆ ಎಂದಿಗೂ ನಾಶವುಂಟಾಗುವದಿಲ್ಲವೆಂದು ನೀನು ನಿಶ್ಚಯ ಪೂರ್ವಕವಾಗಿ ತಿಳಿಯುವದು. ೩೧

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಪಿ ಯಾಂತಿ ಪರಾಂ ಗತಿಂ

ಮತ್ತು, ಎಲೈ ಪಾರ್ಥನೆ, ಪಾಪಯೋನಿಗಳು, ಹೆಂಗಸರು, ವೈಶ್ಯರು ಮತ್ತು ಶೂದ್ರರು, ಇವರಲ್ಲಿ ಯಾರು ನನ್ನನ್ನು ಆಶ್ರಯಿಸುತ್ತಾರೊ ಅವರು ಪರಮಗತಿಯನ್ನೈದುತ್ತಾರೆ. ೩೨

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ

ಹಾಗೆಂದಮೇಲೆ ನನ್ನ ಭಕ್ತರಾದ ಪುಣ್ಯವಂತರಾದ ಬ್ರಾಹ್ಮಣರು ಮತ್ತು ರಾಜರ್ಷಿಗಳು, ಇವರ ವಿಷಯದಲ್ಲಿ ಹೇಳತಕ್ಕುದೇ

ನಿದೆ? ಆದುದರಿಂದ ಈ ಅನಿತ್ಯವಾದ ಮತ್ತು ಸುಖವಿಲ್ಲದ ಲೋಕ
ದಲ್ಲಿ ಜನ್ಮವೆತ್ತಿ ನೀನು ನನ್ನನ್ನು ಭಜಿಸು. ೩೩

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ

ನನ್ನಲ್ಲಿ ಮನಸ್ಸನ್ನಿರಿಸಿ, ನನ್ನ ಭಕ್ತನಾಗಿ, ನನಗೆ ನಮಸ್ಕಾರ
ಮಾಡಿ, ಎಂದರೆ ನನ್ನಲ್ಲಿ ಪರಾಯಣನಾಗಿ, ಆತ್ಮವನ್ನು ನನ್ನೊಡನೆ
ಜೋಡಿಸಿ [ದರೆ], ನೀನು ನನ್ನನ್ನೇ ಪಡೆಯುವೆ. ೩೪

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ರಾಜವಿದ್ಯಾರಾಜಗುಹ್ಯಯೋಗವೆಂಬ ಒಂಬತ್ತನೆಯ ಅಧ್ಯಾಯವು ಸಮಾಪ್ತವಾದುದು.



೧೦

# ವಿ ಭೂ ತಿ ಯೋ ೕ ಗ



ಏಳನೆಯ, ಎಂಟನೆಯ ಮತ್ತು ಒಂಬತ್ತನೆಯ ಅಧ್ಯಾಯದಲ್ಲಿ ಭಕ್ತಿ ಮುಂತಾದುದರ ನಿರೂಪಣೆಯನ್ನು ಮಾಡಿದಮೇಲೆ ಭಗವಂತನು ತನ್ನ ಅನಂತ ವಿಭೂತಿಗಳ ಯತ್ಕಿಂಚಿತ್ ದರ್ಶನವನ್ನು ಭಕ್ತರ ನಿಮಿತ್ತವಾಗಿ ಮಾಡಿಸುತ್ತಾನೆ.

ಶ್ರೀ ಭಗವಾನುವಾಚ—

ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ

ಶ್ರೀ ಭಗವಂತನೆಂದನು—

ಎಲೈ ಮಹಾಬಾಹುವೆ, ಪುನಃ ನನ್ನ ಪರಮ ವಚನವನ್ನು ಕೇಳು. ಇದನ್ನು ನಾನು ಪ್ರಿಯನಾದ ನಿನಗೆ ನಿನ್ನ ಹಿತಕ್ಕಾಗಿ ಹೇಳುವೆನು. ೧

ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ

ದೇವತೆಗಳೂ ಮಹರ್ಷಿಗಳೂ ನನ್ನ ಉತ್ಪತ್ತಿಯನ್ನರಿಯರು; ಏಕೆಂದರೆ ನಾನೇ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲಾ ಪ್ರಕಾರದಿಂದಲೂ ಆದಿಕಾರಣನಾಗಿರುವೆನು. ೨

ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ
ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ

ಲೋಕಗಳ ಮಹೇಶ್ವರನಾದ ನಾನು ಜನ್ಮವಿಲ್ಲದವನು ಮತ್ತು ಆದಿಯಿಲ್ಲದವನು ಎಂದು ಮೃತ್ಯುಲೋಕದಲ್ಲಿರುವ ಯಾವ ಜ್ಞಾನಿಯು ಅರಿಯುತ್ತಾನೊ ಅವನು ಎಲ್ಲಾ ಪಾಪಗಳಿಂದಲೂ ಮುಕ್ತನಾಗಿಬಿಡುತ್ತಾನೆ. ೩

ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ

ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ

ಬುದ್ಧಿ, ಜ್ಞಾನ, ಮೂಢತನವಿಲ್ಲದಿರುವದು, ಕ್ಷಮೆ, ಸತ್ಯ, ಇಂದ್ರಿಯನಿಗ್ರಹ, ಶಾಂತಿ, ಸುಖ, ದುಃಖ, ಜನ್ಮ, ಮೃತ್ಯು, ಭಯ, ಹಾಗೆಯೇ ಅಭಯ, ಅಹಿಂಸೆ, ಸಮತೆ, ಸಂತೋಷ, ತಪಸ್ಸು, ದಾನ, ಯಶಸ್ಸು, ಅಪಯಶಸ್ಸು, ಈ ಪ್ರಕಾರವಾಗಿ ಪ್ರಾಣಿಗಳ ಭಿನ್ನ ಭಿನ್ನ ಭಾವಗಳು ನನ್ನಿಂದ ಉತ್ಪನ್ನವಾಗುತ್ತವೆ. ೪-೫

ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ

ಸಪ್ತರ್ಷಿಗಳು, ಅವರ ಮುಂಚಿನ ಸನಕಾದಿ ನಾಲ್ವರು ಮತ್ತು (ಹದಿನಾಲ್ಕು ಮಂದಿ) ಮನುಗಳು ನನ್ನ ಸಂಕಲ್ಪದಿಂದ ಉತ್ಪನ್ನರಾಗಿದ್ದಾರೆ, ಮತ್ತು ಅವರುಗಳಿಂದ ಈ ಲೋಕಗಳು ಉತ್ಪನ್ನವಾಗಿವೆ. ೬

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ

ಈ ನನ್ನ ವಿಭೂತಿಯನ್ನೂ ಶಕ್ತಿಯನ್ನೂ ಯಥಾರ್ಥವಾಗಿ ಅರಿತವನು ಅವಿಚಲವಾದ ಸಮತೆಯನ್ನು ಹೊಂದುವನೆಂಬುದರಲ್ಲಿ ಸಂಶಯವಿಲ್ಲ ೭

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ

ನಾನು ಎಲ್ಲದರ ಉತ್ಪತ್ತಿಗೆ ಕಾರಣನು ಮತ್ತು ಎಲ್ಲವೂ ನನ್ನಿಂದಲೇ ಪ್ರವೃತ್ತವಾಗುತ್ತದೆಯೆಂಬುದನ್ನು ತಿಳಿದು ಜ್ಞಾನಿಗಳು ಭಾವಪೂರ್ವಕವಾಗಿ ನನ್ನನ್ನು ಭಜಿಸುತ್ತಾರೆ. ೮

ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ

ನನ್ನಲ್ಲಿ ಚಿತ್ತವನ್ನಿಡುವವರು, ನನಗೆ ಪ್ರಾಣವನ್ನರ್ಪಿಸುವವರು, ಒಬ್ಬರಿಗೊಬ್ಬರು ಬೋಧಿಸುತ್ತಲೂ ನಿತ್ಯವೂ ನನ್ನ ಕೀರ್ತನೆಯನ್ನೇ ಮಾಡುತ್ತಲೂ ಸಂತೋಷದಿಂದಲೂ ಆನಂದದಿಂದಲೂ ಇರುತ್ತಾರೆ. ೯

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ

ಈ ರೀತಿಯಲ್ಲಿ ನನ್ನಲ್ಲಿ ತನ್ಮಯರಾಗಿ ನನ್ನನ್ನು ಪ್ರೇಮಪೂರ್ವಕ ಭಜಿಸುವವರಿಗೆ ನಾನು ಜ್ಞಾನವನ್ನು ಕೊಡುತ್ತೇನೆ. ಅದರಿಂದ ಅವರು ನನ್ನನ್ನೈದುತ್ತಾರೆ. ೧೦

ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ

ಅವರ ಮೇಲೆ ದಯೆಗೈದು ಅವರ ಹೃದಯದಲ್ಲಿ ಸ್ಥಿತನಾಗಿ ಜ್ಞಾನವೆಂಬ ಪ್ರಕಾಶಮಯ ದೀಪದಿಂದ ಅವರ ಅಜ್ಞಾನರೂಪ ಅಂಧಕಾರವನ್ನು ನಾಶಗೊಳಿಸುತ್ತೇನೆ. ೧೧

ಅರ್ಜುನ ಉವಾಚ—

ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್
ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಂ

ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ

ಅರ್ಜುನನೆಂದನು—

ಹೇ ಭಗವಂತನೆ, ನೀನು ಪರಬ್ರಹ್ಮನು, ಪರಂಧಾಮನು, ಪರಮಪವಿತ್ರನು. ಎಲ್ಲಾ ಋಷಿಗಳೂ, ದೇವರ್ಷಿಯಾದ ನಾರದನೂ, ಅಸಿತನೂ, ದೇವಲನೂ, ವ್ಯಾಸನೂ ನೀನು ಅವಿನಾಶಿಯು, ದಿವ್ಯಪುರುಷನು, ಆದಿದೇವನು, ಜನ್ಮವಿಲ್ಲದವನು ಮತ್ತು ಈಶ್ವರರೂಪನು ಎಂದು ಭಾವಿಸುತ್ತಾರೆ; ಮತ್ತು ನೀನು ಕೂಡ ಸ್ವಯಂ ಹಾಗೆಯೇ ಹೇಳುತ್ತೀಯೆ. ೧೨, ೧೩

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ
ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ

ಹೇ ಕೇಶವ, ನೀನು ಹೇಳುವದನ್ನು ಸತ್ಯವೆಂದೆಣಿಸುತ್ತೇನೆ. ಹೇ ಭಗವಂತನೆ, ನಿನ್ನ ಸ್ವರೂಪವನ್ನು ದೇವತೆಗಳರಿಯರು, ದಾನವರೂ ಅರಿಯರು. ೧೪

ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ
ಭೂತಭಾವನ ಭೂತೇಶ ದೇವದೇವ ಜಗತ್ಪತೇ

ಹೇ ಪುರುಷೋತ್ತಮ, ಹೇ ಜೀವಗಳ ತಂದೆಯೆ, ಹೇ ಜೀವೇಶ್ವರ, ಹೇ ದೇವರ ದೇವ, ಹೇ ಜಗದೊಡೆಯ, ನೀನು ಸ್ವಯಂ ನಿನ್ನ ಮೂಲಕವೇ ನಿನ್ನನ್ನರಿತಿರುವೆ. ೧೫

ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ

ನೀನು ಯಾವ ವಿಭೂತಿಗಳ ಮುಖಾಂತರ ಈ ಲೋಕಗಳಲ್ಲಿ ವ್ಯಾಪ್ತನಾಗಿದ್ದೀಯೊ ಆ ನಿನ್ನ ವಿಭೂತಿಗಳನ್ನು ನನಗೆ ಪೂರ್ಣರೂಪದಿಂದ ತೋರಿಸುವದುಚಿತವು ೧೬

ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್
ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ

ಹೇ ಯೋಗಿ, ನಿನ್ನನ್ನು ಕುರಿತು ನಿತ್ಯವೂ ಚಿಂತನೆ ಮಾಡುತ್ತಾ ನಿನ್ನನ್ನು ನಾನು ಗುರುತಿಸುವ ಬಗೆಯೆಂತು? ಹೇ ಭಗವಂತನೆ, ಯಾವ ಯಾವ ರೂಪದಲ್ಲಿ ನಿನ್ನ ಚಿಂತನೆ ಮಾಡಬೇಕು? ೧೭

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ

ಹೇ ಜನಾರ್ದನ, ನಿನ್ನ ಶಕ್ತಿಯ ಮತ್ತು ನಿನ್ನ ವಿಭೂತಿಯ ವರ್ಣನೆಯನ್ನು ನನಗೆ ವಿಸ್ತಾರವಾಗಿ ಮಾಡು. ನಿನ್ನ ಅಮೃತಮಯ ವಾಣಿಯನ್ನು ಕೇಳುತ್ತಾ ತೃಪ್ತಿಯುಂಟಾಗುವದೇ ಇಲ್ಲ. ೧೮

ಶ್ರೀ ಭಗವಾನುವಾಚ —

ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ

ಶ್ರೀ ಭಗವಂತನೆಂದನು—

ಎಲೈ ಕುರುಶ್ರೇಷ್ಠನೆ, ಒಳ್ಳೆಯದು, ನಾನು ನನ್ನ ಮುಖ್ಯ ಮುಖ್ಯ ದಿವ್ಯ ವಿಭೂತಿಗಳನ್ನು ನಿನಗೆ ಹೇಳುತ್ತೇನೆ. ಅವುಗಳ ವಿಸ್ತಾರಕ್ಕಂತು ಕೊನೆಯೇ ಇಲ್ಲ. ೧೯

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ

ಎಲೈ ಗುಡಾಕೇಶನೆ, ನಾನು ಎಲ್ಲಾ ಪ್ರಾಣಿಗಳ ಹೃದಯದಲ್ಲಿರುವ ಆತ್ಮವು, ನಾನೇ ಸಕಲ ಭೂತಗಳ ಆದಿಯು, ಮಧ್ಯವು ಮತ್ತು ಅಂತ್ಯವು. ೨೦

ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ

ಆದಿತ್ಯರಲ್ಲಿ ವಿಷ್ಣುವು ನಾನು; ಬೆಳಕುಗಳಲ್ಲಿ ಪ್ರಜ್ವಲಿಸುತ್ತಿರುವ ಸೂರ್ಯನು ನಾನು; ಗಾಳಿಗಳಲ್ಲಿ ಮರೀಚಿಯು ನಾನು; ನಕ್ಷತ್ರಗಳಲ್ಲಿ ಚಂದ್ರನು ನಾನು. ೨೧

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ

ವೇದಗಳಲ್ಲಿ ಸಾಮವೇದವು ನಾನು, ದೇವತೆಗಳಲ್ಲಿ ಇಂದ್ರನು ನಾನು, ಇಂದ್ರಿಯಗಳಲ್ಲಿ ಮನಸ್ಸು ನಾನು, ಮತ್ತು ಪ್ರಾಣಿಗಳಲ್ಲಿ ಚೇತನವು ನಾನು. ೨೨

ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಂ

ರುದ್ರರಲ್ಲಿ ಶಂಕರನು ನಾನು, ಯಕ್ಷರಲ್ಲಿಯೂ ರಾಕ್ಷಸರಲ್ಲಿಯೂ ಕುಬೇರನು ನಾನು, ವಸುಗಳಲ್ಲಿ ಅಗ್ನಿಯು ನಾನು, ಪರ್ವತಗಳಲ್ಲಿ ಮೇರುವು ನಾನು. ೨೩

ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ
ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ

ಎಲೈ ಪಾರ್ಥನೆ, ಪುರೋಹಿತರಲ್ಲಿ ಪ್ರಧಾನನಾದ ಬೃಹಸ್ಪತಿಯು ನಾನೆಂದು ತಿಳಿ. ಸೇನಾಪತಿಗಳಲ್ಲಿ ಕಾರ್ತಿಕಸ್ವಾಮಿಯು ನಾನು ಮತ್ತು ಸರೋವರಗಳಲ್ಲಿ ಸಾಗರವು ನಾನು. ೨೪

ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ

ಮಹರ್ಷಿಗಳಲ್ಲಿ ಭೃಗುವು ನಾನು, ಮಾತುಗಳಲ್ಲಿ ಏಕಾಕ್ಷರಿಯಾದ ಓಂ[ಕಾರವು] ನಾನು, ಯಜ್ಞಗಳಲ್ಲಿ ಜಪಯಜ್ಞವು ನಾನು ಮತ್ತು ಸ್ಥಾವರಗಳಲ್ಲಿ ಹಿಮಾಲಯವು ನಾನು. ೨೫

ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ

ಸಕಲ ವೃಕ್ಷಗಳಲ್ಲಿ ಅಶ್ವತ್ಥವು (ಅರಳಿಯು) ನಾನು, ದೇವರ್ಷಿಗಳಲ್ಲಿ ನಾರದನು ನಾನು, ಗಂಧರ್ವರಲ್ಲಿ ಚಿತ್ರರಥನು ನಾನು ಮತ್ತು ಸಿದ್ಧರಲ್ಲಿ ಕಪಿಲಮುನಿಯು ನಾನು. ೨೬

ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ

ಕುದುರೆಗಳಲ್ಲಿ ಅಮೃತದೊಳಗಿಂದ ಉತ್ಪನ್ನನಾದ ಉಚ್ಚೈಃಶ್ರವಸ್ಸು ನಾನೆಂದು ತಿಳಿ. ಆನೆಗಳಲ್ಲಿ ಐರಾವತವು, ಮತ್ತು ಮನುಷ್ಯರಲ್ಲಿ ರಾಜನು ನಾನು. ೨೭

ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ

ಆಯುಧಗಳಲ್ಲಿ ವಜ್ರಾಯುಧವು ನಾನು, ಹಸುಗಳಲ್ಲಿ ಕಾಮಧೇನುವು ನಾನು, ಪ್ರಜೆಗಳ ಉತ್ಪತ್ತಿಗೆ ಕಾರಣನಾದ ಕಾಮದೇವನು ನಾನು, ಹಾವುಗಳಲ್ಲಿ ವಾಸುಕಿಯು ನಾನು. ೨೮

ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ
ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಂ

ನಾಗಗಳಲ್ಲಿ ನಾನು ಶೇಷನಾಗನು, ನೀರಿನಲ್ಲಿ ಸಂಚರಿಸುವ ಪ್ರಾಣಿಗಳಲ್ಲಿ ವರುಣನು ನಾನು, ಪಿತೃಗಳಲ್ಲಿ ಅರ್ಯಮನು ನಾನು ಮತ್ತು ದಂಡನೆ ಮಾಡುವವರಲ್ಲಿ ಯಮನು ನಾನು. ೨೯

ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಂ
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ

ದೈತ್ಯರಲ್ಲಿ ಪ್ರಹ್ಲಾದನು ನಾನು, ಎಣಿಸುವವರಲ್ಲಿ ಕಾಲವು ನಾನು, ಪಶುಗಳಲ್ಲಿ ಸಿಂಹವು ನಾನು, ಪಕ್ಷಿಗಳಲ್ಲಿ ಗರುಡನು ನಾನು. ೩೦

ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಂ
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ

ಪಾವನಗೊಳಿಸುವವರಲ್ಲಿ ಪವನನು ನಾನು, ಶಸ್ತ್ರಧಾರಿಗಳಲ್ಲಿ ಪರಶುರಾಮನು ನಾನು, ಮೀನುಗಳಲ್ಲಿ ಮೊಸಳೆಯು ನಾನು, ನದಿಗಳಲ್ಲಿ ಗಂಗೆಯು ನಾನು. ೩೧

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ

ಎಲೈ ಅರ್ಜುನನೆ, ಸೃಷ್ಟಿಯ ಆದಿಯೂ ಅಂತ್ಯವೂ ಮಧ್ಯವೂ ನಾನು, ವಿದ್ಯೆಗಳಲ್ಲಿ ಆತ್ಮವಿದ್ಯೆಯು ನಾನು ಮತ್ತು ವಾದವಿವಾದ ಮಾಡುವವರಲ್ಲಿ ವಾದವು ನಾನು. ೩೨

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ
ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ

ಅಕ್ಷರಗಳಲ್ಲಿ ಅಕಾರವು ನಾನು, ಸಮಾಸಗಳಲ್ಲಿ ದ್ವಂದ್ವವು ನಾನು, ಅವಿನಾಶಿಯಾದ ಕಾಲವು ನಾನು ಮತ್ತು ಸರ್ವವ್ಯಾಪಿ [ಯಾಗಿ] ರಕ್ಷಣೆ ಮಾಡುವವನು ಕೂಡ ನಾನು. ೩೩

ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಂ
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ

ಎಲ್ಲರನ್ನೂ ಒಯ್ಯುವ ಮೃತ್ಯುವು ನಾನು, ಮುಂದೆ ಉತ್ಪನ್ನರಾಗಲಿರುವವರ ಉತ್ಪತ್ತಿಕಾರಣನು ನಾನು ಮತ್ತು ಸ್ತ್ರೀ ಜಾತಿಯ ಹೆಸರುಗಳಲ್ಲಿ ಕೀರ್ತಿ, ಲಕ್ಷ್ಮೀ, ವಾಣೀ, ಸ್ಮೃತಿ, ಮೇಧಾ (ಬುದ್ಧಿ) ಧೃತಿ (ಧೈರ್ಯ) ಮತ್ತು ಕ್ಷಮೆ, ಇವು ನಾನು. ೩೪

ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಂ
ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ

ಸಾಮಗಳಲ್ಲಿ ಬೃಹತ್ (ದೊಡ್ಡ) ಸಾಮವು ನಾನು, ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸು ನಾನು, ತಿಂಗಳುಗಳಲ್ಲಿ ಮಾರ್ಗಶೀರ್ಷವು ನಾನು, ಋತುಗಳಲ್ಲಿ ವಸಂತರುತುವು ನಾನು. ೩೫

ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಂ
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಂ

ಛಲ ಮಾಡುವವರಲ್ಲಿ ಜೂಜು ನಾನು, ಪ್ರತಾಪವಂತನ ಪ್ರಭಾವವು ನಾನು, ಜಯವು ನಾನು, ನಿಶ್ಚಯವು ನಾನು, ಸಾತ್ವಿಕಭಾವವುಳ್ಳವರ ಸತ್ವವು ನಾನು. ೩೬

ಟಿಪ್ಪಣಿ—ಛಲ ಮಾಡುವವರ ಜೂಜು ನಾನು ಎಂಬ ಮಾತಿನಿಂದ ಅಳುಕುವ ಆವಶ್ಯಕತೆಯೇನೂ ಇಲ್ಲ. ಇಲ್ಲಿ ಸಾರಾಸಾರದ ನಿರ್ಣಯವಿಲ್ಲ; ಆದರೆ ನಡೆಯುವದೆಲ್ಲವೂ ಈಶ್ವರನ ಆಜ್ಞೆಯಿಲ್ಲದೆ ನಡೆಯುವದಿಲ್ಲವೆಂಬುದನ್ನು ಸೂಚಿಸುವ ಭಾವವು ಇಲ್ಲಿದೆ ಮತ್ತು ಎಲ್ಲವೂ ಅವನ ಅಧೀನವೆಂಬುದನ್ನರಿತ ಕಪಟಿಯು ಕೂಡ ತನ್ನ ಅಭಿಮಾನವನ್ನು ಬಿಟ್ಟು ಕಪಟವನ್ನು ತೊರೆಯುವನು.

ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ

ವೃಷ್ಣಿಕುಲದಲ್ಲಿ ವಾಸುದೇವನು ನಾನು, ಪಾಂಡವರಲ್ಲಿ ಧನಂಜಯ (ಅರ್ಜುನ) ನು ನಾನು, ಮುನಿಗಳಲ್ಲಿ ವ್ಯಾಸನು ನಾನು ಮತ್ತು ಕವಿಗಳಲ್ಲಿ ಉಶನಸನು ನಾನು. ೩೭

ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಂ
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ

ಶಾಸಕನ ದಂಡವು ನಾನು, ಜಯವನ್ನಿಚ್ಛಿಸುವವರ ನೀತಿಯು ನಾನು, ಗೂಢ ವಿಷಯಗಳಲ್ಲಿ ಮೌನವು ನಾನು ಮತ್ತು ಜ್ಞಾನವಂತರ ಜ್ಞಾನವು ನಾನು. ೩೮

ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ
ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ

ಹೇ ಅರ್ಜುನ, ಸಮಸ್ತ ಪ್ರಾಣಿಗಳ ಉತ್ಪತ್ತಿಯ ಕಾರಣನು ನಾನು, ಸ್ಥಾವರವಾಗಲಿ ಜಂಗಮವಾಗಲಿ ಇರುವದೆಲ್ಲಾ ನಾನಿಲ್ಲದೆ ಇಲ್ಲ. ೩೯

ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ

ಎಲೈ ಪರಂತಪನೆ, ನನ್ನ ದಿವ್ಯ ವಿಭೂತಿಗಳಿಗೆ ಅಂತವೇ ಇಲ್ಲ. ವಿಭೂತಿಗಳ ವಿಸ್ತಾರವನ್ನು ನಾನು ಕೇವಲ ದೃಷ್ಟಾಂತ ರೂಪದಿಂದಲೇ ಸೂಚಿಸಿದ್ದೇನೆ. ೪೦

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಂ

ಯಾವ ಯಾವದು ವಿಭೂತಿಯುಳ್ಳದಾಗಿಯೂ ಸಿರಿಯುಳ್ಳದಾಗಿಯೂ ಪ್ರಭಾವವುಳ್ಳದಾಗಿಯೂ ಇದೆಯೊ ಅದೆಲ್ಲವೂ ನನ್ನ ತೇಜಸ್ಸಿನ ಅಂಶದಿಂದಲೇ ಉಂಟಾದುದೆಂದು ತಿಳಿ. ೪೧

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್

ಅಥವಾ, ಎಲೈ ಅರ್ಜುನನೆ, ಇದನ್ನು ವಿಸ್ತಾರವಾಗಿ ತಿಳಿದುಕೊಂಡು ನೀನು ಮಾಡಬೇಕಾದುದೇನು? ನನ್ನ ಒಂದೇ ಅಂಶದಿಂದ ಈ ಇಡೀ ಜಗತ್ತನ್ನು ಧಾರಣೆ ಮಾಡಿದ್ದೇನೆ. ೪೨

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ವಿಭೂತಿಯೋಗವೆಂಬ ಹತ್ತನೆಯ ಅಧ್ಯಾಯವು ಸಮಾಪ್ತವಾದುದು.



೧೧

# ವಿಶ್ವರೂಪದರ್ಶನಯೋಗ



ಈ ಅಧ್ಯಾಯದಲ್ಲಿ ಭಗವಂತನು ತನ್ನ ವಿರಾಟ್ ಸ್ವರೂಪವನ್ನು ಅರ್ಜುನನಿಗೆ ತೋರಿಸುತ್ತಾನೆ. ಇದರಲ್ಲಿ ವಾದಗಳಿಲ್ಲ, ಕೇವಲ ಕಾವ್ಯವಿದೆ. ಈ ಅಧ್ಯಾಯವನ್ನೋದುತ್ತಾ ಮನುಷ್ಯನು ನಿಲ್ಲಿಸುವದೇ ಇಲ್ಲ.

ಅರ್ಜುನ ಉವಾಚ—

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಂ
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ

ಅರ್ಜುನನು ಹೇಳಿದನು—

ನೀನು ನನ್ನ ಮೇಲೆ ಕೃಪೆ ಮಾಡಿ ಈ ಆಧ್ಯಾತ್ಮಿಕ ಪರಮ ರಹಸ್ಯವನ್ನು ಹೇಳಿದ್ದೀಯೆ. ನೀನು ನನಗೆ ಹೇಳಿರುವ ಮಾತುಗಳಿಂದ ನನ್ನ ಈ ಮೋಹವು ದೂರವಾಯಿತು. ೧

ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಂ

ಪ್ರಾಣಿಗಳ ಉತ್ಪತ್ತಿ ಮತ್ತು ನಾಶ, ಇದನ್ನು ಕುರಿತು ನೀನು ವಿಸ್ತಾರವಾಗಿ ಹೇಳಿದುದನ್ನು ನಾನು ಕೇಳಿದ್ದೇನೆ. ಅದೇ ಪ್ರಕಾರ ನಿನ್ನ ಅವಿನಾಶಿಯಾದ ಮಾಹಾತ್ಮ್ಯವನ್ನೂ, ಹೇ ಕಮಲಪತ್ರಾಕ್ಷ, ಕೇಳಿದೆನು. ೨

ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ

ಹೇ ಪರಮೇಶ್ವರ, ನೀನು ಹೇಗೆ ನಿನ್ನ ಪರಿಚಯುವನ್ನು ಮಾಡಿ ಕೊಟ್ಟಿಯೊ ಹಾಗೆಯೇ ಇದ್ದೀಯೆ ಹೇ ಪುರುಷೋತ್ತಮನು, ನಿನ್ನ ಆ ಈಶ್ವರೀರೂಪದ ದರ್ಶನವನ್ನು ಹೊಂದಲು ನನಗೆ ಇಚ್ಛೆಯಾಗುತ್ತದೆ. ೩

ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ

ಹೇ ಪ್ರಭುವೆ, ಆ ದರ್ಶನವಾಗುವದು ನನಗೆ ಸಾಧ್ಯವೆಂದು ನೀನು ಎಣಿಸುವದಾದರೆ, ಹೇ ಯೋಗೇಶ್ವರ, ಆ ಅವ್ಯಯು ರೂಪದ ದರ್ಶನವನ್ನು ಮಾಡಿಸು. ೪

ಶ್ರೀ ಭಗವಾನುವಾಚ

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ

ಶ್ರೀ ಭಗವಂತನು ಹೇಳಿದನು—

ಎಲೈ ಪಾರ್ಥನೆ, ನನ್ನ ನೂರಾರು, ಸಾವಿರಾರು, ರೂಪಗಳನ್ನು ನೋಡು. ಅವು ನಾನಾ ಪ್ರಕಾರವಾಗಿಯೂ, ದಿವ್ಯವಾಗಿಯೂ, ಭಿನ್ನಭಿನ್ನ ವರ್ಣ ಮತ್ತು ಆಕಾರಗುಳುಳ್ಳವಾಗಿಯೂ ಇವೆ. ೫

ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ

ಹೇ ಭಾರತ, ಆದಿತ್ಯ, ವಸು, ರುದ್ರ, ಅಶ್ವಿನರಿಬ್ಬರು ಮತ್ತು ಮರುತರು ಇವರನ್ನು ನೋಡು. ಹಿಂದೆ ಎಂದೂ ನೋಡದ ಇಂತಹ ದೊಡ್ಡ ಅಚ್ಚರಿಯುನ್ನು ನೀನು ನೋಡು. ೬

ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ

ಹೇ ಗುಡಾಕೇಶ, ಇಲ್ಲಿ ನನ್ನ ಶರೀರದಲ್ಲಿ ಒಂದೇ ರೂಪದಲ್ಲಿರುವ ಇಡೀ ಸ್ಥಾವರ ಮತ್ತು ಜಂಗಮ ಜಗತ್ತನ್ನೂ ಮತ್ತು ನೀನು ಏನೇನನ್ನ ನೋಡಬಯಸುತ್ತೀಯೊ ಅದೆಲ್ಲವನ್ನೂ ಇಂದು ನೋಡಿಬಿಡು. ೭

ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ

ಈ ನಿನ್ನ ಚರ್ಮದ ಕಣ್ಣುಗಳಿಂದ ನೀನು ನನ್ನನ್ನು ನೋಡಲಾರೆ. ನಿನಗೆ ನಾನು ದಿವ್ಯ ಚಕ್ಷುವನ್ನು ಕೊಡುವೆನು. ನೀನು ನನ್ನ ಈಶ್ವರೀಯೋಗವನ್ನು ನೋಡು. ೮

ಸಂಜಯ ಉವಾಚ—

ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ

ಸಂಜಯನೆಂದನು—

ಎಲೈ ರಾಜನೆ, ಯೋಗೇಶ್ವರನಾದ ಕೃಷ್ಣನು ಹೀಗೆ ಹೇಳಿ ಪಾರ್ಥನಿಗೆ ತನ್ನ ಪರಮ ಈಶ್ವರೀ ಸ್ವರೂಪವನ್ನು ತೋರಿಸಿದನು. ೯

ಅನೇಕವಕ್ತ್ರನಯನಮನೇಕಾದ್ಭುತದರ್ಶನಂ
ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ

ಅವನು ಅನೇಕ ಮುಖ ಮತ್ತು ಕಣ್ಣುಗಳನ್ನುಳ್ಳವನಾಗಿಯೂ ಅನೇಕ ಅದ್ಭುತಗಳನ್ನು ಪ್ರದರ್ಶಿಸುವವನಾಗಿಯೂ ಅನೇಕ ದಿವ್ಯ ಭೂಷಣಗಳನ್ನುಳ್ಳವನಾಗಿಯೂ ಮತ್ತು ಸಜ್ಜುಗೊಳಿಸಿದ ಅನೇಕ ಆಯುಧಗಳನ್ನುಳ್ಳವನಾಗಿಯೂ ಇದ್ದನು. ೧೦

ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ
ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ

ಅವನು ಅನೇಕ ದಿವ್ಯ ಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿದ್ದನು ಮತ್ತು ದಿವ್ಯವಾದ ಸುವಾಸನೆಯುಳ್ಳ ಲೇಪನಗಳನ್ನುಳ್ಳವನಾಗಿದ್ದನು. ಸರ್ವಪ್ರಕಾರದಿಂದಲೂ ಆಶ್ಚರ್ಯಮಯನೂ ಅನಂತನೂ ಸರ್ವವ್ಯಾಪಿಯೂ ಆದ ದೇವನು ಈ ರೀತಿಯಾಗಿದ್ದನು. ೧೧

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ

ಆಕಾಶದಲ್ಲಿ ಸಾವಿರ ಸೂರ್ಯರ ತೇಜಸ್ಸು ಒಟ್ಟಿಗೇ ಬೆಳಗಿದರೆ ಆ ಪ್ರಕಾಶವು ಆ ಮಹಾತ್ಮನ ತೇಜಸ್ಸಿನಂತೆ ಒಂದು ವೇಳೆ ಆದರೂ ಆಗಬಹುದು. ೧೨

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ

ಅಲ್ಲಿ, ಈ ದೇವಾಧಿದೇವನ ಶರೀರದಲ್ಲಿ, ಪಾಂಡವನು ಅನೇಕವಿಧವಾಗಿ ವಿಭಕ್ತವಾದ ಇಡೀ ಜಗತ್ತು ಒಂದೇ ರೂಪದಲ್ಲಿರುವದನ್ನು ನೋಡಿದನು. ೧೩

ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ

ಆಗ ಆಶ್ಚರ್ಯಚಕಿತನಾಗಿ ಮತ್ತು ರೋಮಾಂಚಿತನಾಗಿ ಧನಂಜಯನು ತಲೆವಾಗಿ ಕೈ ಜೋಡಿಸಿ ಇಂತೆಂದನು. ೧೪

ಅರ್ಜುನ ಉವಾಚ---

ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತವಿಶೇಷಸಂಘಾನ್
ಬ್ರಹ್ಮಾಣಮೀಶಂ ಕಮಲಾಸನಸ್ಥಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್

ಅರ್ಜುನನೆಂದನು—

ಹೇ ದೇವ, ನಿನ್ನ ದೇಹದಲ್ಲಿ ನಾನು ದೇವತೆಗಳನ್ನೂ, ಬೇರೆ ಬೇರೆ ವಿಧದ ಸಮಸ್ತ ಪ್ರಾಣಿಗಳ ಸಮುದಾಯಗಳನ್ನೂ, ಕಮಲಾ

ಸನದ ಮೇಲೆ ವಿರಾಜಮಾನರಾದ ಈಶಬ್ರಹ್ಮರನ್ನೂ, ಸಮಸ್ತ ಋಷಿಗಳನ್ನೂ, ಮತ್ತು ದಿವ್ಯ ಸರ್ಪಗಳನ್ನೂ ನೋಡುತ್ತಿದ್ದೇನೆ. ೧೫

ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ
ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ

ನೀನು ಅನೇಕ ಕೈ, ಹೊಟ್ಟೆ, ಮುಖ ಮತ್ತು ಕಣ್ಣುಗಳುಳ್ಳವನಾಗಿಯೂ ಅನಂತ ರೂಪವುಳ್ಳವನಾಗಿಯೂ ಇರುವದನ್ನು ನೋಡುತ್ತಿದ್ದೇನೆ. ನಿನಗೆ ಕೊನೆಯಿಲ್ಲ, ಮಧ್ಯವಿಲ್ಲ, ಮೊದಲಿಲ್ಲ. ಹೇ ವಿಶ್ವೇಶ್ವರ, ನಾನು ನಿನ್ನ ವಿಶ್ವರೂಪದ ದರ್ಶನವನ್ನು ಪಡೆಯುತ್ತಿದ್ದೇನೆ. ೧೬

ಕಿರೀಟಿನಂ ಗದಿನಂ ಚಕ್ರಿಣಂ ಚ ತೇಜೋರಾಶಿಂ ಸರ್ವತೋ ದೀಪ್ತಿಮಂತಂ
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾದ್ದೀಪ್ತಾನಲಾರ್ಕದ್ಯುತಿಮಪ್ರಮೇಯಂ

ಮುಕುಟಧಾರಿಯಾಗಿಯೂ, ಗದಾಧಾರಿಯಾಗಿಯೂ, ಚಕ್ರಧಾರಿಯಾಗಿಯೂ, ತೇಜಃಪುಂಜನಾಗಿಯೂ, ಎಲ್ಲಾ ಕಡೆಯೂ ಹೊಳೆಯುತ್ತಿರುವ ಜ್ಯೋತಿಯುಳ್ಳವನಾಗಿಯೂ, ಮತ್ತು ಕಷ್ಟದಿಂದ [ಸಾಧ್ಯವಾದ] ದರ್ಶನವುಳ್ಳವನಾಗಿಯೂ [ಎಂದರೆ ಆತನ ಪ್ರಕಾಶವು ಬಹು ತೀಕ್ಷ್ಣವಾದುದರಿಂದ ಆತನನ್ನು ನೋಡುವದು ದುಸ್ಸಾಧ್ಯವಾಗಿದ್ದಿತೆಂದು ಭಾವ] ಅಳತೆಯಿಲ್ಲದವನಾಗಿಯೂ ಮತ್ತು ಉರಿಯುತ್ತಿರುವ ಬೆಂಕಿಗೂ ಸೂರ್ಯನಿಗೂ ಸಾಟಿಯಾಗಿ ಎಲ್ಲಾ ದಿಕ್ಕುಗಳಲ್ಲಿಯೂ ದೇದೀಪ್ಯಮಾನನಾಗಿಯೂ ಇರುವ ನಿನ್ನನ್ನು ನಾನು ನೋಡುತ್ತಿದ್ದೇನೆ. ೧೭

ತ್ವಮಕ್ಷರಂ ಪರಮಂ ವೇದಿತವ್ಯಂ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋ ಮತೋ ಮೇ

ತಿಳಿಯಲು ಯೋಗ್ಯನಾದ ಪರಮ ಅಕ್ಷರರೂಪನು, ಈ ಜಗತ್ತಿನ ಕಡೆಯ ಆಧಾರನು, ಸನಾತನ ಧರ್ಮದ ಅವಿನಾಶಿಯಾದ ರಕ್ಷಕನು, ಮತ್ತು ಸನಾತನ ಪುರುಷನು ನೀನೆಂದು ನಾನು ಎಣಿಸುತ್ತೇನೆ. ೧೮

ಅನಾದಿಮಧ್ಯಾಂತಮನಂತವೀರ್ಯಮನಂತಬಾಹುಂ ಶಶಿಸೂರ್ಯನೇತ್ರಂ
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ ಸ್ವತೇಜಸಾ ವಿಶ್ವಮಿದಂ ತಪಂತಂ

ಯಾರಿಗೆ ಆದಿಯಾಗಲಿ ಮಧ್ಯವಾಗಲಿ ಅಂತ್ಯವಾಗಲಿ ಇಲ್ಲವೊ ಯಾರಿಗೆ ಅನಂತ ಬಾಹುಗಳಿವೆಯೊ, ಯಾರಿಗೆ ಸೂರ್ಯಚಂದ್ರರೆಂಬ ಕಣ್ಣುಗಳಿವೆಯೊ, ಯಾರ ಮುಖವು ಉರಿಯುತ್ತಿರುವ ಬೆಂಕಿಯಂತಿದೆಯೊ ಮತ್ತು ಯಾರು ತನ್ನ ತೇಜಸ್ಸಿನಿಂದ ಈ ಜಗತ್ತನ್ನು ತಪಸುತ್ತಿರುವನೊ, ಅಂತಹ ನಿನ್ನನ್ನು ನಾನು ನೋಡುತ್ತಿದ್ದೇನೆ. ೧೯

ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್

ಆಕಾಶಕ್ಕೂ ಭೂಮಿಗೂ ಮಧ್ಯೆಯಿರುವ ಈ ಅಂತರದಲ್ಲಿಯೂ ಸಮಸ್ತ ದಿಕ್ಕುಗಳಲ್ಲಿಯೂ ನೀನೊಬ್ಬನೇ ವ್ಯಾಪಿಸಿದ್ದೀಯೆ. ಎಲೈ ಮಹಾತ್ಮನೆ, ಈ ನಿನ್ನ ಅದ್ಭುತ, ಉಗ್ರ,ರೂಪವನ್ನು ನೋಡಿ ಮೂರು ಲೋಕಗಳೂ ನಡುಗುತ್ತವೆ. ೨೦

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ ಸ್ತುನಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ

ಮತ್ತು ಈ ದೇವತೆಗಳ ಗುಂಪು ನಿನ್ನೊಳಗೆ ಪ್ರವೇಶಮಾಡುತ್ತಾ ಇದೆ. ಭಯಭೀತರಾಗಿ ಎಷ್ಟೋ [ಮಂದಿ] ಕೈ ಜೋಡಿಸಿ

ಕೊಂಡು ನಿನ್ನನ್ನು ಸ್ತುತಿಸುತ್ತಿದ್ದಾರೆ. ಮಹರ್ಷಿಗಳ ಮತ್ತು ಸಿದ್ಧರ ಸಮುದಾಯವು '(ಜಗತ್ತಿಗೆ) ಕಲ್ಯಾಣವಾಗಲಿ' ಎಂದು ಹೇಳುತ್ತಾ ಅನೇಕ ರೀತಿಯಿಂದ ನಿನ್ನ ಯಶಸ್ಸನ್ನು ಹಾಡುತ್ತಿದೆ. ೨೧

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ ವಿಶ್ವೇಽಶ್ವಿನೌ ಮರು
ತಶ್ಚೋಷ್ಮಪಾಶ್ಚ
ಗಂಧರ್ವಯಕ್ಷಾಸುರಸಿದ್ಧಸಂಘಾ ವೀಕ್ಷಂತೇ ತ್ವಾಂ
ವಿಸ್ಮಿತಾಶ್ಚೈವ ಸರ್ವೇ

ರುದ್ರರು, ಆದಿತ್ಯರು, ವಸುಗಳು, ಸಾಧ್ಯಗಣಗಳು, ವಿಶ್ವೇದೇವತೆಗಳು, ಅಶ್ವಿನೀಕುಮಾರರು, ಮರುತರು, ಬಿಸಿಯಾಗಿಯೇ ಕುಡಿಯುವ ಪಿತೃಗಳು, ಗಂಧರ್ವರು, ಯಕ್ಷರು, ಅಸುರರು ಮತ್ತು ಸಿದ್ಧರ ಗುಂಪುಗಳು, ಇವರೆಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ. ೨೨

ರೂಪಂ ಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ
ಬಹುಬಾಹೂರುಪಾದಂ
ಬಹೂದರಂ ಬಹುದಂಷ್ಟ್ರಾಕರಾಲಂ ದೃಷ್ಟ್ವಾ ಲೋಕಾಃ
ಪ್ರವ್ಯಥಿತಾಸ್ತಥಾಹಂ

ಎಲೈ ಮಹಾಬಾಹುವೆ, ಅನೇಕ ಮುಖಗಳನ್ನು ಮತ್ತು ಕಣ್ಣುಗಳನ್ನು ಉಳ್ಳ, ಅನೇಕ ಕೈಗಳನ್ನೂ ತೊಡೆಗಳನ್ನೂ ಕಾಲುಗಳನ್ನೂ ಉಳ್ಳ, ಅನೇಕ ಹೊಟ್ಟೆಗಳುಳ್ಳ ಮತ್ತು ಅನೇಕ ಕೋರೆ ಹಲ್ಲುಗಳಿಂದ ಕರಾಳವಾಗಿ ಕಾಣುವ, ವಿಶಾಲ ರೂಪವನ್ನು ನೋಡಿ ಜನಗಳು ವ್ಯಾಕುಲರಾಗಿ ಹೋಗಿದ್ದಾರೆ. ಹಾಗೆಯೇ ನಾನೂ ವ್ಯಾಕುಲನಾಗಿಬಿಟ್ಟಿದ್ದೇನೆ. ೨೩

ನಭಃಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತ
ವಿಶಾಲನೇತ್ರಂ
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ ಧೃತಿಂ ನ ವಿಂದಾಮಿ
ಶಮಂ ಚ ವಿಷ್ಣೋ

ಆಕಾಶವನ್ನು ಮುಟ್ಟುತ್ತಿರುವ, ಪ್ರಜ್ವಲಿಸುತ್ತಿರುವ, ಅನೇಕ ಬಣ್ಣಗಳುಳ್ಳ, ತೆರೆದ ಮುಖವುಳ್ಳ, ಮತ್ತು ವಿಶಾಲ, ಕಾಂತಿಯುತ ನೇತ್ರಗಳುಳ್ಳ ನಿನ್ನನ್ನು ನೋಡಿ, ಎಲೈ ವಿಷ್ಣುವೆ, ನನ್ನ ಹೃದಯವು ವ್ಯಾಕುಲವಾಗಿ ಬಿಟ್ಟಿದೆ ಮತ್ತು ನಾನು ಧೈರ್ಯದಿಂದಾಗಲಿ ಶಾಂತಿಯಿಂದಾಗಲಿ ಇರಲಾರೆನು. ೨೪

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾ
ನಲಸಂನಿಭಾನಿ
ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ
ದೇವೇಶ ಜಗನ್ನಿವಾಸ

ಪ್ರಳಯಕಾಲದ ಬೆಂಕಿಯಂತಿರುವ ಕರಾಳ ದಂಷ್ಟ್ರಗಳನ್ನುಳ್ಳ ನಿನ್ನ ಮುಖವನ್ನು ನೋಡಿ ನನಗೆ ದಿಕ್ಕು ತೋಚುವದೂ ಇಲ್ಲ, ಶಾಂತಿ ದೊರೆಯುವದೂ ಇಲ್ಲ ; ಹೇ ದೇವೇಶ, ಹೇ ಜಗನ್ನಿವಾಸ, ಪ್ರಸನ್ನನಾಗು ! ೨೫

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ಸರ್ವೇ ಸಹೈವಾವನಿ
ಪಾಲಸಂಘೈಃ
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ ಸಹಾಸ್ಮದೀಯೈರಪಿ
ಯೋಧಮುಖ್ಯೈಃ

ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ ದಂಷ್ಟ್ರಾಕರಾಲಾನಿ
ಭಯಾನಕಾನಿ
ಕೇಚಿದ್ವಿಲಗ್ನಾ ದಶನಾಂತರೇಷು ಸಂದೃಶ್ಯಂತೇ
ಚೂರ್ಣಿತೈರುತ್ತಮಾಂಗೈಃ

ಎಲ್ಲಾ ರಾಜರ ಗುಂಪಿನೊಡನೆ ಈ ಧೃತರಾಷ್ಟ್ರನ ಮಕ್ಕಳು, ಭೀಷ್ಮ, ದ್ರೋಣಾಚಾರ್ಯ, ಈ ಸೂತಪುತ್ರ ಕರ್ಣ ಮತ್ತು ನಮ್ಮ ಮುಖ್ಯಯೋಧರು, [ಇವರೆಲ್ಲಾ] ಕರಾಳ ದಂಷ್ಟ್ರಗಳುಳ್ಳ ನಿನ್ನ ಭಯಾನಕವಾದ ಬಾಯಿಯೊಳಗೆ ಪ್ರವೇಶ ಮಾಡುತ್ತಿರುವರು. ಎಷ್ಟೋ ಮಂದಿಯ ತಲೆಗಳು ಚೂರಾಗಿ ನಿನ್ನ ಹಲ್ಲುಗಳ ಮಧ್ಯೆ ಸಿಕ್ಕಿರುವದು ಕಾಣುತ್ತದೆ. ೨೬-೨೭

ಯಥಾ ನದೀನಾಂ ಬಹವೋಽಂಬುವೇಗಾಃ ಸಮುದ್ರಮೇವಾಭಿ
ಮುಖಾ ದ್ರವಂತಿ
ತಥಾ ತವಾಮೀ ನರಲೋಕವೀರಾ ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ

ನದಿಯ ದೊಡ್ಡ ಪ್ರವಾಹವು ಸಮುದ್ರದ ಕಡೆಗೆ ಮುಂದುವರಿಯುವಂತೆ ನಿನ್ನ ಪ್ರಜ್ವಲಿಸುವ ಮುಖದೊಳಗೆ ಈ ಲೋಕನಾಯಕರು ಪ್ರವೇಶಿಸುತ್ತಿದ್ದಾರೆ. ೨೮

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ ವಿಶಂತಿ ನಾಶಾಯ
ಸಮೃದ್ಧವೇಗಾಃ
ತಥೈವ ನಾಶಾಯ ವಿಶಂತಿ ಲೋಕಾಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ

ಪತಂಗ (ಚಿಟ್ಟೆಹುಳು)ಗಳು ತಮ್ಮ ನಾಶಕ್ಕಾಗಿ ಹೆಚ್ಚು ಹೆಚ್ಚು ವೇಗದಿಂದ ಉರಿಯುತ್ತಿರುವ ಬೆಂಕಿಯೊಳಕ್ಕೆ ಕುಪ್ಪಳಿಸುವಂತೆಯೇ ನಿನ್ನ ಬಾಯೊಳಕ್ಕೂ ಎಲ್ಲಾ ಜನರು ಏರುತ್ತಿರುವ ವೇಗದಿಂದ ಪ್ರವೇಶಿಸುತ್ತಿದಾರೆ ೨೯

ಲೇಲಿಹ್ಯಸೇ ಗ್ರಸಮಾನಃ ಸಮಂತಾಲ್ಲೋಕಾನ್ಸಮಗ್ರಾನ್ವದನೈರ್ಜ್ವ
ಲದ್ಭಿಃ
ತೇಜೋಭಿರಾಪೂರ್ಯ ಜಗತ್ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ
ವಿಷ್ಣೋ

ಎಲ್ಲಾ ಜನರನ್ನೂ ಎಲ್ಲಾ ಕಡೆಯಿಂದಲೂ ನುಂಗಿ ನೀನು ನಿನ್ನ ಪ್ರಜ್ವಲಿಸುವ ಬಾಯನ್ನು ಚಪ್ಪರಿಸುತ್ತಿರುವೆ. ಹೇ ಸರ್ವವ್ಯಾಪಿಯಾದ ವಿಷ್ಣುವೆ, ನಿನ್ನ ಉಗ್ರವಾದ ಪ್ರಕಾಶವು ಇಡೀ ಜಗತ್ತನ್ನು ತೇಜಸ್ಸಿನಿಂದ ತುಂಬುತ್ತಿದೆ. ಮತ್ತು ತಪಿಸುತ್ತಿದೆ. ೩೦

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ
ಪ್ರಸೀದ
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನ ಹಿ ಪ್ರಜಾನಾಮಿ ತವ
ಪ್ರವೃತ್ತಿಂ

ಉಗ್ರರೂಪನಾದ ನೀನು ಯಾರೆಂಬುದನ್ನು ನನಗೆ ತಿಳಿಸು ಹೇ ದೇವವರ, ನೀನು ಪ್ರಸನ್ನನಾಗು! ಆದಿಕಾರಣನಾಗಿರುವ ನಿನ್ನನ್ನು ಅರಿಯಲಿಚ್ಛಿಸುವೆನು. ನಿನ್ನ ಪ್ರವೃತ್ತಿಯನ್ನು ನಾನರಿಯೆನು. ೩೧

ಶ್ರೀ ಭಗವಾನುವಾಚ--

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ

ಶ್ರೀ ಭಗವಂತನೆಂದನು—

ಲೋಕಗಳನ್ನು ನಾಶಪಡಿಸುವ ಪ್ರಚಂಡಕಾಲನು ನಾನು. ಲೋಕಗಳನ್ನು ನಾಶಪಡಿಸುವದಕ್ಕಾಗಿ ನಾನು ಇಲ್ಲಿಗೈತಂದಿದ್ದೇನೆ. ಪ್ರತಿಯೊಂದು ಸೇನೆಯಲ್ಲೂ ನೆರೆದಿರುವ ಈ ಎಲ್ಲಾ ಯೋಧರಲ್ಲಿ ಯಾರೂ, ನೀನು ಹೋರಾಡಲೊಪ್ಪದಿದ್ದರೂ, ಉಳಿಯುವದಿಲ್ಲ. ೩೨

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಂ
ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್

ಆದುದರಿಂದ ನೀನು ಎದ್ದು ನಿಲ್ಲು, ಕೀರ್ತಿಯನ್ನು ಪಡೆ, ಶತ್ರುವನ್ನು ಗೆದ್ದು ಧನಧಾನ್ಯದಿಂದ ತುಂಬಿದ ರಾಜ್ಯವನ್ನು ಭೋಗಿಸು. ಇವರುಗಳನ್ನು ನಾನು ಮೊದಲೇ ಕೊಂದುಹಾಕಿಬಿಟ್ಟಿದ್ದೇನೆ. ಎಲೈ ಸವ್ಯಸಾಚಿಯೆ, ನೀನಾದರೊ ಕೇವಲ ನಿಮಿತ್ತರೂಪನಾಗು. ೩೩

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ ಕರ್ಣಂ ತಥಾನ್ಯಾನಪಿ ಯೋಧವೀರಾನ್
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್

ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಮತ್ತು ಇತರೇತರ ಯೋಧರನ್ನು ನಾನು ಕೊಂದುಹಾಕಿಬಿಟ್ಟೇ ಇದ್ದೇನೆ. ಅವರನ್ನು ನೀನು ಹೊಡೆ; ಯುದ್ಧ ಮಾಡು; ಶತ್ರುವನ್ನು ನೀನು ರಣದಲ್ಲಿ ಕೊಲ್ಲಲಿರುವೆ. ೩೪

ಸಂಜಯ ಉವಾಚ --

ಏತಚ್ಛ್ರುತ್ವಾ ವಚನಂ ಕೇಶವಸ್ಯ ಕೃತಾಂಜಲಿರ್ವೇಪಮಾನಃ ಕಿರೀಟೀ
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ
ಪ್ರಣಮ್ಯ

ಸಂಜಯನೆಂದನು —

ಕೇಶವನ ಈ ಮಾತನ್ನು ಕೇಳಿ ಕೈಜೋಡಿಸಿಕೊಂಡು, ಕಂಪಿಸುತ್ತಾ, ಬಾರಿಬಾರಿ ನಮಸ್ಕಾರಮಾಡಿ, ಹೆದರಿ ಹೆದರಿ, ಪ್ರಣಾಮಗೈದು, ಮುಕುಟಧಾರಿಯಾದ ಅರ್ಜುನನು ಗದ್ಗದ ಕಂಠದಿಂದ ಶ್ರೀ ಕೃಷ್ಣನಿಗಿಂತೆಂದನು. ೩೫

ಅರ್ಜುನ ಉವಾಚ -

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಜ್ಯತೇ ಚ
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ ಸರ್ವೇ ನಮಸ್ಯಂತಿ ಚ
ಸಿದ್ಧಸಂಘಾಃ

ಅರ್ಜುನನೆಂದನು —

ಹೇ ಹೃಷಿಕೇಶ, ನಿನ್ನ ಕೀರ್ತನೆಯನ್ನು ಮಾಡಿ ಜಗತ್ತು ಹರ್ಷಿತವಾಗುತ್ತದೆ, ಮತ್ತು ನಿನಗಾಗಿ ಯಾವ ಅನುರಾಗವು ಉದಿಸುವುದೊ, ಅದು ಉಚಿತವೇ ಸರಿ. ಭಯಭೀತರಾದ ರಾಕ್ಷಸರು ಇಲ್ಲಿಗಲ್ಲಿಗೆ ಓಡುತ್ತಾರೆ ಮತ್ತು ಸಿದ್ಧರ ಸಮುದಾಯವೆಲ್ಲಾ ನಿನಗೆ ನಮಸ್ಕಾರ ಮಾಡುತ್ತದೆ. ೩೬

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್ ಗರೀಯಸೇ ಬ್ರಹ್ಮಣೋ
ಪ್ಯಾದಿಕರ್ತ್ರೇ
ಅನಂತದೇವೇಶ ಜಗನ್ನಿವಾಸ ತ್ವಮಕ್ಷರಂ ಸದಸತ್ತತ್ಪರಂ ಯತ್

ಹೇ ಮಹಾತ್ಮ, ಅವರು ನಿನಗೆ ನಮಸ್ಕಾರ ಮಾಡದೆ ಇರುವ ರೇಕೆ? ನೀನು ಬ್ರಹ್ಮನಿಗಿಂತಲೂ ಹೆಚ್ಚಿನ ಆದಿಕರ್ತನು. ಹೇ ಅನಂತ, ಹೇ ದೇವೇಶ, ಹೇ ಜಗನ್ನಿವಾಸ, ನೀನು ಅಕ್ಷರನು, ಸತ್ ಮತ್ತು ಅಸತ್ ನೀನು, ಇವೆರಡನ್ನೂ ಮೀರಿ ಇರುವುದಾವದೊ ಅದು ಕೂಡ ನೀನೇ. ೩೭

ತ್ವಮಾದಿದೇವಃ ಪುರುಷಃ ಪುರಾಣಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್
ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ ತ್ವಯಾ ತತಂ ವಿಶ್ವಮನಂತ ರೂಪ

ನೀನು ಆದಿದೇವನು, ನೀನು ಪುರಾಣ ಪುರುಷನು. ನೀನು ಈ ವಿಶ್ವದ ಪರಮ ಆಶ್ರಯಸ್ಥಾನವು. ತಿಳಿಯುವವನು ನೀನು, ತಿಳಿಯಲು ಯೋಗ್ಯನು ನೀನು. ಪರಮಧಾಮನು ನೀನು. ಹೇ ಅನಂತರೂಪ, ಈ ಜಗತ್ತಿನಲ್ಲ ನೀನು ವ್ಯಾಪ್ತನಾಗಿದ್ದೀಯೆ ೩೮

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿ ನಮೋ ನಮಸ್ತೇ

ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಪ್ರಪಿತಾಮಹ, ನೀನೇ ಆಗಿದ್ದೀಯೆ ನಿನಗೆ ಸಹಸ್ರ ನಮಸ್ಕಾರಗಳಿರಲಿ. ಮತ್ತು ಪುನಃ ನಿನಗೆ ನಮಸ್ಕಾರಗಳು ೩೯

ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತು ತೇ ಸರ್ವತ ಏವ ಸರ್ವ
ಅನಂತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ

ಹೇ ಸರ್ವ, ನಿನಗೆ ಮುಂದೆ, ಹಿಂದೆ, ಎಲ್ಲ ಕಡೆಯಿಂದಲೂ ನಮಸ್ಕಾರ. ನಿನ್ನ ವೀರ್ಯವು ಅನಂತವಾದುದು, ನಿನ್ನ ಶಕ್ತಿಯು ಅಪಾರವಾದುದು, ಎಲ್ಲವನ್ನೂ ನೀನೇ ರಕ್ಷಿಸುವೆ. ಆದುದರಿಂದ ಸರ್ವನೂ ನೀನೇ. ೪೦

ಸಖೇತಿ ಮತ್ವಾ ಪ್ರಸಭಂ ಯದುಕ್ತಂ ಹೇ ಕೃಷ್ಣ ಹೇ ಯಾದವ ಹೇ ಸಖೇತಿ
ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾತ್ಪ್ರಣಯೇನ ವಾಪಿ

ಯಚ್ಚಾವಹಾಸಾರ್ಥಮಸತ್ಕೃತೋಸಿ ವಿಹಾರಶಯ್ಯಾಸನಭೋಜನೇಷು
ಏಕೋಥವಾಪ್ಯಚ್ಯುತ ತತ್ಸಮಕ್ಷಂ ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್

ಮಿತ್ರನೆಂದು ತಿಳಿದು ಮತ್ತು ನಿನ್ನ ಈ ಮಹಿಮೆಯನ್ನರಿಯದೆ ಹೇ ಕೃಷ್ಣ, ಹೇ ಯಾದವ, ಹೇ ಸಖನೆ, ಎಂಬದಾಗಿ ನಿನ್ನನ್ನು ಸಂಬೋಧಿಸಿ ನಾನು ಪ್ರಮಾದದಿಂದಾಗಲಿ ಪ್ರೇಮದಿಂದಾಗಲಿ ಮಾಡಿದ ಅವಿವೇಕವನ್ನೂ, ಮತ್ತು ವಿನೋದಕ್ಕಾಗಿ ಆಡುತ್ತಾ, ಕೂಡುತ್ತಾ, ಊಟಮಾಡುತ್ತಾ, ಎಂದರೆ ಜೊತೆಯಲ್ಲಿ ನಿನಗೆ [ನನ್ನಿಂದ] ಉಂಟಾದ ಅಪಮಾನವನ್ನೂ ಕ್ಷಮಿಸಬೇಕೆಂದು ನಾನು ನಿನ್ನನ್ನು ಬೇಡುತ್ತೇನೆ. ೪೧, ೪೨

ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್
ನ ತ್ವತ್ಸಮೋಸ್ತ್ಯಭ್ಯಧಿಕಃ ಕುತೋನ್ಯೋ ಲೋಕತ್ರಯೇಪ್ಯಪ್ರತಿಮಪ್ರಭಾವಃ

ಸ್ಥಾವರ ಜಂಗಮ ಜಗತ್ತಿಗೆ ನೀನು ತಂದೆಯು. ಅದಕ್ಕೆ ನೀನು ಪೂಜ್ಯ, ಶ್ರೇಷ್ಠ, ಗುರುವು ನಿನ್ನ ಸಮಾನರಾರೂ ಇಲ್ಲವೆಂದ ಮೇಲೆ ನಿನಗಿಂತ ಹೆಚ್ಚಿನವನೆಲ್ಲಿಂದ ಬಂದಾನು? ಮೂರು ಲೋಕದಲ್ಲಿಯೂ ನಿನ್ನ ಸಾಮರ್ಥ್ಯಕ್ಕೆ ಸಾಟಿಯಿಲ್ಲ ೪೩

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಮಹಮೀಶಮೀಡ್ಯಮ್
ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್

ಆದುದರಿಂದ ಸಾಷ್ಟಾಂಗವೆರಗಿ, ನೀನು ಪ್ರಸನ್ನನಾಗೆಂದು ನಿನ್ನನ್ನು, ಪೂಜ್ಯ ಈಶ್ವರನನ್ನು, ಪ್ರಾರ್ಥಿಸುತ್ತೇನೆ. ಹೇ ದೇವ,

ತಂದೆಯು ಮಗನನ್ನು, ಗೆಳೆಯನು ಗೆಳೆಯನನ್ನು, ಸಹಿಸುವಂತೆ, ನೀನು ನನಗೆ ಪ್ರಿಯನಾದ ಕಾರಣ ನನ್ನ ಕಲ್ಯಾಣಕ್ಕೋಸುಗ ನನ್ನನ್ನು ಸಹಿಸುವದುಚಿತವು. ೪೪

> ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ ಭಯೇನ ಚ ಪ್ರವ್ಯಥಿತಂ ಮನೋ ಮೇ
> ತದೇವ ಮೇ ದರ್ಶಯ ದೇವ ರೂಪಂ ಪ್ರಸೀದ ದೇವೇಶ ಜಗನ್ನಿವಾಸ

ಹಿಂದೆ ನೋಡದ ನಿನ್ನ ಇಂತಹ ರೂಪವನ್ನು ನೋಡಿ ನಾನು ರೋಮಾಂಚಿತನಾಗಿದ್ದೇನೆ. ಮತ್ತು ಭಯದಿಂದ ನನ್ನ ಮನಸ್ಸು ವ್ಯಾಕುಲವಾಗಿಬಿಟ್ಟಿದೆ. ಅದುದರಿಂದ, ಹೇ ದೇವ, ನಿನ್ನ ಮೊದಲಿನ ರೂಪವನ್ನು ತೋರಿಸು. ಹೇ ದೇವೇಶ, ಹೇ ಜಗನ್ನಿವಾಸ, ನೀನು ಪ್ರಸನ್ನನಾಗು. ೪೫

> ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ
> ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ

ಪೂರ್ವದಂತೆಯೇ [ಇರುವ] ನಿನ್ನ—ಮುಕುಟಗದಾಚಕ್ರಧಾರಿಯ—ದರ್ಶನವನ್ನು ಹೊಂದಲು ಆಸಿಸುತ್ತೇನೆ. ಹೇ ಸಹಸ್ರಬಾಹುವೇ, ಹೇ ವಿಶ್ವಮೂರ್ತಿಯೇ ನಿನ್ನ ಚತುರ್ಭುಜ ರೂಪವನ್ನು ಧರಿಸು. ೪೬

ಶ್ರೀ ಭಗವಾನುವಾಚ—

> ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ ದರ್ಶಿತಮಾತ್ಮಯೋಗಾತ್
> ತೇಜೋಮಯಂ ವಿಶ್ವಮನಂತಮಾದ್ಯಂ ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್

ಶ್ರೀ ಭಗವಂತನೆಂದನು—

ಎಲೈ ಅರ್ಜುನನೆ, ನಿನ್ನ ಮೇಲೆ ಪ್ರಸನ್ನನಾಗಿ ನಾನು ನಿನಗೆ ನನ್ನ ಶಕ್ತಿಯಿಂದ ನನ್ನ ತೇಜೋಮಯವಾದ, ವಿಶ್ವವ್ಯಾಪಿಯಾದ,

ಅನಂತವಾದ, ಪರಮ ಆದಿರೂಪವನ್ನು ತೋರಿಸಿದ್ದೇನೆ; ಅದನ್ನು ನಿನ್ನ ಹೊರತು ಇನ್ನಾರೂ [ಇದಕ್ಕೆ] ಮುಂಚೆ ನೋಡಿಲ್ಲ. ೪೭

ನ ವೇದಯಜ್ಞಾಧ್ಯಯನೈರ್ನ ದಾನೈರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ
ಏವಂ ರೂಪಃ ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ

ಹೇ ಕುರುಪ್ರವೀರ, ವೇದಾಭ್ಯಾಸದಿಂದ, ಯಜ್ಞದಿಂದ, ಇತರೇತರ ಶಾಸ್ತ್ರಗಳ ಅಧ್ಯಯನದಿಂದ, ದಾನದಿಂದ, ಕ್ರಿಯೆಗಳಿಂದ, ಅಥವಾ ಉಗ್ರ ತಪಸ್ಸುಗಳಿಂದ, ಇವೇತರಿಂದಲೂ ನಿನ್ನ ಹೊರತು ಇನ್ನಾರೂ ಈ ನನ್ನ ರೂಪವನ್ನು ನೋಡಲು ಸಮರ್ಥರಲ್ಲ. ೪೮

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪಮಿದಂ ಪ್ರಪಶ್ಯ

ನನ್ನ ಇಂತಹ ವಿಕರಾಳ ರೂಪವನ್ನು ಕಂಡು ಗಾಬರಿಪಡಬೇಡ; ಮೋಹವಶನಾಗಬೇಡ. ಭಯವನ್ನುಳಿದು ಶಾಂತಚಿತ್ತನಾಗು ಮತ್ತು ನನ್ನ ಈ ಪರಿಚಿತರೂಪವನ್ನು ಪುನಃ ನೋಡು. ೪೯

ಸಂಜಯ ಉವಾಚ—

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂ ರೂಪಂ ದರ್ಶಯಾಮಾಸ ಭೂಯಃ
ಆಶ್ವಾಸಯಾಮಾಸ ಚ ಭೀತಮೇನಂ ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ

ಸಂಜಯನೆಂದನು—

ವಾಸುದೇವನನು ಅರ್ಜುನನಿಗೆ ಹೀಗೆ ಹೇಳಿ ತನ್ನ ರೂಪವನ್ನು ಪುನಃ ತೋರಿಸಿದನು. ಮತ್ತು ಮರಳಿ ಶಾಂತಮೂರ್ತಿಯನ್ನು

ಧರಿಸಿ ಭಯಭೀತನಾದ ಅರ್ಜುನನಿಗೆ ಆ ಮಹಾತ್ಮನು ಧೈರವಸೆಯಿತ್ತನು. ೫೦

ಅರ್ಜುನ ಉವಾಚ--

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ

ಅರ್ಜುನನೆಂದನು--

ಹೇ ಜನಾರ್ದನ, ಈ ನಿನ್ನ ಸೌಮ್ಯ ಮಾನವ ಸ್ವರೂಪವನ್ನು ನೋಡಿ ಈಗ ನಾವು ಶಾಂತನಾಗಿದ್ದೇನೆ ಮತ್ತು ಸ್ಥಿಮಿತಕ್ಕೆ ಬಂದಿದ್ದೇನೆ. ೫೧

ಶ್ರೀ ಭಗವಾನುವಾಚ

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ

ಶ್ರೀ ಭಗವಂತನೆಂದನು --

ನನ್ನ ಯಾವ ರೂಪವನ್ನು ನೀನು ನೋಡಿದ್ದೀಯೊ ಅದರ ದರ್ಶನವು ಬಹು ದುರ್ಲಭ. ದೇವತೆಗಳು ಕೂಡ ಆ ರೂಪವನ್ನೀಕ್ಷಿಸಲು ಕಾತರಪಡುತ್ತಾರೆ. ೫೨

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ

ನನ್ನ ಯಾವ ದರ್ಶನವನ್ನು ನೀನು ಪಡೆದಿದ್ದೀಯೊ ಆ ದರ್ಶನವು" ವೇದದಿಂದಾಗಲಿ, ತಪಸ್ಸಿನಿಂದಾಗಲಿ, ದಾನದಿಂದಾಗಲಿ ಅಥವಾ ಯಜ್ಞದಿಂದಾಗಲಿ ಒದಗಲಾರದು. ೫೩

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ

ಪರಂತು, ಹೇ ಅರ್ಜುನ, ಹೇ ಪರಂತಪ, ನನ್ನ ಸಂಬಂಧವಾಗಿ ಇಂತಹ ಜ್ಞಾನವು, ಇಂತಹ ನನ್ನ ದರ್ಶನವು ಮತ್ತು

ನನ್ನಲ್ಲಿ ವಾಸ್ತವಿಕ ಪ್ರವೇಶವು, ಕೇವಲ ಅನನ್ಯ ಭಕ್ತಿಯಿಂದಲೇ ಸಂಭವಿಸುವುದು. ೫೪

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ

ಹೇ ಪಾಂಡವ, ಸಮಸ್ತ ಕರ್ಮಗಳನ್ನೂ ನನಗೆ ಸಮರ್ಪಿಸಿ, ನನ್ನಲ್ಲಿ ಪರಾಯಣನಾಗಿದ್ದು, ನನ್ನ ಭಕ್ತನಾಗಿ, ಆಸಕ್ತಿಯನ್ನು ತ್ಯಜಿಸಿ, ಸಕಲ ಪ್ರಾಣಿಗಳಲ್ಲೂ ದ್ವೇಷರಹಿತನಾಗಿ ಜೀವಿಸುತ್ತಿರುವವನು ನನ್ನನ್ನು ಪಡೆಯುತ್ತಾನೆ. ೫೫

ಓಂ ತತ್ಸತ್

ಈ ಪ್ರಕಾರ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ವಿಶ್ವರೂಪದರ್ಶನಯೋಗವೆಂಬ ಹನ್ನೊಂದನೆಯ ಅಧ್ಯಾಯವು ಸಮಾಪ್ತವಾದುದು.



೧೨

# ಭಕ್ತಿಯೋಗ



ಪುರುಷೋತ್ತಮನ ದರ್ಶನವು ಅನನ್ಯಭಕ್ತಿಯಿಂದಲೇ ಆಗುವುದೆಂದು ಭಗವಂತನು ಹೇಳಿದ ಮೇಲಂತು ಭಕ್ತಿಯ ಸ್ವರೂಪವು ವಿವರಿಸಲ್ಪಡಲೇಬೇಕಾಯಿತಲ್ಲ. ಈ ಹನ್ನೆರಡನೆಯ ಅಧ್ಯಾಯವನ್ನು ಎಲ್ಲರೂ ಕಂಠಪಾಠ ಮಾಡಬೇಕು. ಇದು ಅತ್ಯಂತ ಸಣ್ಣ ಅಧ್ಯಾಯಗಳಲ್ಲಿ ಒಂದು. ಇದರಲ್ಲಿ ಕೊಟ್ಟಿರುವ ಭಕ್ತನ ಲಕ್ಷಣಗಳು ಸದಾ ಮನನ ಮಾಡಲು ಯೋಗ್ಯವಾಗಿವೆ.

ಅರ್ಜುನ ಉವಾಚ—

ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ

ಅರ್ಜುನನೆಂದನು—

ಈ ರೀತಿಯಾಗಿ ನಿರಂತರವೂ ನಿನ್ನನ್ನು ಧ್ಯಾನಿಸುತ್ತಾ ನಿನ್ನ ಉಪಾಸನೆಯನ್ನು ಮಾಡುತ್ತಾ, ನಿನ್ನ ಅವಿನಾಶಿಯಾದ ಅವ್ಯಕ್ತವಾದ ಸ್ವರೂಪವನ್ನು ಧ್ಯಾನಿಸುವ ಭಕ್ತರಲ್ಲಿ ಯಾವ ಯೋಗಿಯನ್ನು ಶ್ರೇಷ್ಠನೆಂದೆಣಿಸಬೇಕು? ೧

ಶ್ರೀಭಗವಾನುವಾಚ—

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ

ಶ್ರೀ ಭಗವಂತನೆಂದನು—

ನಿತ್ಯವೂ ಧ್ಯಾನಗ್ರಯುತ್ತಾ ನನ್ನಲ್ಲಿ ಮನಸ್ಸನ್ನಿಟ್ಟು ಶ್ರದ್ಧಾಪೂರ್ವಕವಾಗಿ ನನ್ನ ಉಪಾಸನೆ ಮಾಡುವವನನ್ನು ನಾನು ಶ್ರೇಷ್ಠಯೋಗಿಯೆಂದೆಣಿಸುತ್ತೇನೆ. ೨

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್

ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ

ಎಲ್ಲಾ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು, ಎಲ್ಲೆಡೆಯೂ ಸಮತೆಯನ್ನು ಪಾಲಿಸಿ, ಧೃಢ, ಅಚಲ, ಧೀರ, ಅಚಿಂತ್ಯ, ಸರ್ವವ್ಯಾಪೀ, ಅವ್ಯಕ್ತ, ಅವರ್ಣನೀಯ, ಅವಿನಾಶಿ ಸ್ವರೂಪದ ಉಪಾಸನೆಯನ್ನು ಮಾಡುವವರು ಸಮಸ್ತ ಪ್ರಾಣಿಗಳ ಹಿತದಲ್ಲಿ ತೊಡಗಿದ್ದು ನನ್ನನ್ನೇ ಪಡೆಯುತ್ತಾರೆ. ೩-೪

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ

ಅವ್ಯಕ್ತದಲ್ಲಿ ಮಗ್ನವಾಗಿರುವ ಚಿತ್ತವುಳ್ಳವರಿಗೆ ಕಷ್ಟವು ಹೆಚ್ಚು. ಅವ್ಯಕ್ತ ಗತಿಯನ್ನು ದೇಹಧಾರಿಯು ಕಷ್ಟದಿಂದ ಮಾತ್ರವೇ ಪಡೆಯಬಲ್ಲುದು. ೫

ಟಿಪ್ಪಣಿ—ದೇಹಧಾರಿಯಾದ ಮನುಷ್ಯನು ಮೂರ್ತಿಯಿಲ್ಲದ ಸ್ವರೂಪವನ್ನು ಕೇವಲ ಕಲ್ಪನೆ ಮಾಡಬಲ್ಲನೇ ಹೊರತು ಅವನ ಬಳಿ ಮೂರ್ತಿಯಿಲ್ಲದ ಸ್ವರೂಪ [ವನ್ನು ಸೂಚಿಸುವದ] ಕ್ಕೆ ಒಂದಾದರೂ ನಿಶ್ಚಯಾತ್ಮಕ ಶಬ್ದವಿಲ್ಲ; ಆದುದರಿಂದ ಅವನು ನಿಷೇಧಾತ್ಮಕ 'ನೇತಿ' ಶಬ್ದದಿಂದ ತೃಪ್ತಿಪಟ್ಟುಕೊಳ

ಬೇಕು. ಹೀಗಿರುವದರಿಂದಲೇ ಮೂರ್ತಿಪೂಜೆಯನ್ನು ನಿಷೇಧಿಸುವವರು ಕೂಡ, ಸೂಕ್ಷ್ಮರೀತಿಯಿಂದ ನೋಡಿದರೆ, ಮೂರ್ತಿಪೂಜಕರೇ ಆಗುತ್ತಾರೆ. ಪುಸ್ತಕದ ಪೂಜೆಯನ್ನು ಮಾಡುವದು, ದೇವಾಲಯಕ್ಕೆ ಹೋಗಿ ಪೂಜಿಸುವದು, ಒಂದೇ ದಿಕ್ಕಿನ ಕಡೆ ಮುಖವಿಟ್ಟು ಪೂಜಿಸುವದು, ಇವೆಲ್ಲವೂ ಸಾಕಾರ ಪೂಜೆಯ ಲಕ್ಷಣಗಳಾಗಿವೆ. ಆದರೂ ಸಾಕಾರದ ಆಚೆ ನಿರಾಕಾರ, ಅಚಿಂತ್ಯ, ಸ್ವರೂಪವಿದೆಯೆಂಬುದನ್ನು ತಿಳಿದ ಮೇಲೆಯೇ ಎಲ್ಲರಿಗೂ ನಿಸ್ತಾರ[ಮೋಕ್ಷ]ವು ಲಭಿಸುವದು. ಭಕ್ತನು ಭಗವಂತನಲ್ಲಿ ನಿಲೀನನಾಗಿ, ಕಡೆಗೆ ಕೇವಲ ಏಕ, ಅದ್ವಿತೀಯ, ಅರೂಪ ಭಗವಂತನೇ ಇರುವದು ಭಕ್ತಿಯ ಪರಾಕಾಷ್ಠದಶೆಯು. ಆದರೆ ಈ ಸ್ಥಿತಿಯನ್ನು ಸಾಕಾರದ ಮೂಲಕ ಸುಲಭನಾಗಿ ಸೇರಬಹುದು. ಆದುದರಿಂದ ನಿರಾಕಾರವನ್ನು ನೇರವಾಗಿ ಸೇರುವ ಮಾರ್ಗವು ಕಷ್ಟಸಾಧ್ಯವೆಂದು ಹೇಳಲ್ಪಟ್ಟಿದೆ

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್
ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್

ಆದರೆ, ಎಲೈ ಪಾರ್ಥನೆ, ನನ್ನಲ್ಲಿ ಪರಾಯಣರಾಗಿದ್ದು ಎಲ್ಲಾ ಕರ್ಮಗಳನ್ನೂ ನನಗೆ ಸಮರ್ಪಿಸಿ, ಏಕನಿಷ್ಠೆಯಿಂದ ನನ್ನ ಧ್ಯಾನವನ್ನು ಮಾಡುತ್ತಾ, ನನ್ನನ್ನು ಉಪಾಸಿಸಿ, ನನ್ನಲ್ಲಿ ತಮ್ಮ ಚಿತ್ತವನ್ನು ಪೋಣಿಸಿ ಇರುವವರನ್ನು ನಾನು ಮೃತ್ಯುರೂಪವಾದ ಸಂಸಾರಸಾಗರದಿಂದ ಒಡನೆಯೇ ಕಡೆಹಾಯಿಸುತ್ತೇನೆ. ೬,೭

ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ

ನಿನ್ನ ಮನಸ್ಸನ್ನು ನನ್ನಲ್ಲಿಡು, ನಿನ್ನ ಬುದ್ಧಿಯನ್ನು ನನ್ನಲ್ಲಿಡು, ಇದರಿಂದ ಈ (ಜನ್ಮದ) ನಂತರ ನಿಸ್ಸಂಶಯವಾಗಿ ನನ್ನನ್ನೇ ಪಡೆಯುವೆ. ೮

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ

ನೀನು ನನ್ನಲ್ಲಿ ನಿನ್ನ ಮನಸ್ಸನ್ನು ಸ್ಥಿರಗೊಳಿಸಲು ಅಸಮರ್ಥ
ನಾದರೆ, ಹೇ ಧನಂಜಯ, ಅಭ್ಯಾಸಯೋಗದಿಂದ ನನ್ನನ್ನು ಹೊಂ
ದುವ ಇಚ್ಛೆಯನ್ನಿಟ್ಟುಕೊಳ್ಳಬೇಕು. ೯

ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ
ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ

ಇಂತಹ ಅಭ್ಯಾಸವನ್ನು ಮಾಡುವದಕ್ಕೂ ನೀನು ಅಸಮರ್ಥ
ನಾದರೆ ಕರ್ಮಗಳೆಲ್ಲವನ್ನೂ ನನಗೆ ಅರ್ಪಿಸಿ ಈ ಪ್ರಕಾರ
ನನ್ನ ನಿಮಿತ್ತವಾಗಿ ಕರ್ಮ ಮಾಡುತ್ತಾ ಇದ್ದು ಕೂಡ ನೀನು
ಮೋಕ್ಷವನ್ನೈದುವೆ. ೧೦

ಟಿಪ್ಪಣಿ—ಅಭ್ಯಾಸವೆಂದರೆ ಚಿತ್ತವೃತ್ತಿನಿರೋಧದ ಸಾಧನೆ. ಜ್ಞಾನ
ವೆಂದರೆ ಶ್ರವಣಮನನಾದಿಗಳು ಧ್ಯಾನವೆಂದರೆ ಉಪಾಸನೆ ಇವುಗಳ ಫಲರೂ
ಪವಾಗಿ ಕರ್ಮಫಲತ್ಯಾಗವು ಕಾಣಬರದಿದ್ದರೆ ಆ ಅಭ್ಯಾಸವು ಅಭ್ಯಾಸವಲ್ಲ,
ಆ ಜ್ಞಾನವು ಜ್ಞಾನವಲ್ಲ ಮತ್ತು ಆ ಧ್ಯಾನವು ಧ್ಯಾನವಲ್ಲ.

ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್

ಮತ್ತು ನನ್ನ ನಿಮಿತ್ತವಾಗಿ ಕರ್ಮ ಮಾಡುವದಕ್ಕೆ ಕೂಡ
ನಿನಗೆ ಶಕ್ತಿಯಿಲ್ಲದಿದ್ದರೆ ಯತ್ನಪೂರ್ವಕವಾಗಿ ಎಲ್ಲಾ ಕರ್ಮಗಳ
ಫಲವನ್ನೂ ತ್ಯಜಿಸು. ೧೧

ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್

ಅಭ್ಯಾಸಮಾರ್ಗಕ್ಕಿಂತ ಜ್ಞಾನಮಾರ್ಗವು ಹೆಚ್ಚು ಶ್ರೇಯಸ್ಕ
ರವಾದುದು. ಜ್ಞಾನಮಾರ್ಗಕ್ಕಿಂತ ಧ್ಯಾನಮಾರ್ಗವು ಹೆಚ್ಚಿನದು.
ಮತ್ತು ಧ್ಯಾನಮಾರ್ಗಕ್ಕಿಂತ ಕರ್ಮಫಲತ್ಯಾಗವು ಶ್ರೇಷ್ಠವಾದುದು.
ಏಕೆಂದರೆ ಈ ತ್ಯಾಗದ ಅಂತ್ಯದಲ್ಲಿ ತುರಂತವಾಗಿ ಶಾಂತಿಯೇ ಒದ
ಗುತ್ತದೆ ೧೨

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ

ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ

ಎಲ್ಲಾ ಪ್ರಾಣಿಗಳಲ್ಲೂ ದ್ವೇಷರಹಿತನೂ, ಎಲ್ಲರ ಮಿತ್ರನೂ, ದಯಾವಂತನೂ, ಮಮತೆಯಿಲ್ಲದವನೂ, ಅಹಂಕಾರವಿಲ್ಲದವನೂ, ಸುಖದುಃಖವನ್ನು ಸಮಾನ[ವಾಗಿ ಎಣಿಸುವವ]ನೂ, ಕ್ಷಮಾಶೀಲನೂ, ಸದಾ ಸಂತೋಷಿಯೂ, ಯೋಗಯುಕ್ತನೂ, ಇಂದ್ರಿಯನಿಗ್ರಹಿಯೂ, ದೃಢನಿಶ್ಚಯಿಯೂ, ನನ್ನಲ್ಲಿ ತನ್ನ ಬುದ್ಧಿಯನ್ನೂ ಮನಸ್ಸನ್ನೂ ಅರ್ಪಿಸಿರುವವನೂ, ಆದ ನನ್ನ ಭಕ್ತನು ನನಗೆ ಪ್ರಿಯನು. ೧೩,೧೪

ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ

ಜನರಿಗೆ ಉದ್ವೇಗ ಮಾಡದೆ, ಜನರಿಂದ ಉದ್ವೇಗಗೊಳ್ಳದೆ, ಹರ್ಷ, ಕ್ರೋಧ, ಅಸೂಯೆ, ಭಯ , ಉದ್ವೇಗ, ಇವುಗಳಿಂದ ಮುಕ್ತನಾಗಿರುವವನು ನನಗೆ ಪ್ರಿಯನು. ೧೫

ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ

ಇಚ್ಛಾರಹಿತನಾಗಿ, ಪವಿತ್ರನಾಗಿ, ದಕ್ಷ (ಸಾವಧಾನವುಳ್ಳವ)ನಾಗಿ, ತಟಸ್ಥನಾಗಿ, ಚಿಂತಾರಹಿತನಾಗಿ, ಸಕಲ ಸಂಕಲ್ಪಗಳನ್ನೂ ಬಿಟ್ಟವನಾಗಿ ಇರುವವನು ನನ್ನ ಭಕ್ತನು. ಅವನು ನನಗೆ ಪ್ರಿಯನು. ೧೬

ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ
ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ

ಹರ್ಷಗೊಳ್ಳದೆ, ದ್ವೇಷಿಸದೆ, ಚಿಂತೆಪಡದೆ, ಆಸೆಗಳ ಬಂಧನಕ್ಕೆ ಸಿಲುಕದೆ, ಶುಭಾಶುಭವನ್ನು ತ್ಯಜಿಸುವವನಾಗಿ ಇರುವ ಭಕ್ತಿಪರಾಯಣನು ನನಗೆ ಪ್ರಿಯನು. ೧೭

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ

ಶತ್ರು-ಮಿತ್ರ, ಮಾನ-ಅಪಮಾನ, ಶೀತ-ಉಷ್ಣ, ಸುಖ-ದುಃಖ, ಇವೆಲ್ಲದರಲ್ಲಿಯೂ ಸಮತೆಯುಳ್ಳವನಾಗಿ, ಆಸಕ್ತಿಯನ್ನು ಬಿಟ್ಟು, ನಿಂದೆಯನ್ನೂ ಸ್ತುತಿಯನ್ನೂ ಕುರಿತು ಒಂದೇ ಸಮನಾಗಿ ವರ್ತಿಸುತ್ತಾ, ಮೌನವನ್ನು ಧರಿಸಿ, ಏನು ಒದಗಿದರೂ ಅದರಿಂದ ಸಂತೋಷಗೊಂಡು, ತನ್ನ ಸ್ವಂತ ಸ್ಥಾನವಾವುದೂ ಇಲ್ಲದವನಾಗಿ, ಸ್ಥಿರಚಿತ್ತನಾಗಿರುವ ಮುನಿಯು ಭಕ್ತನು -- ನನಗೆ ಪ್ರಿಯನು.
೧೮,೧೯

ಯೇ ತು ಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇತೀವ ಮೇ ಪ್ರಿಯಾಃ

ಈ ಪವಿತ್ರವಾದ, ಅಮೃತರೂಪವಾದ ಜ್ಞಾನವನ್ನು ನನ್ನಲ್ಲಿ ಪರಾಯಣರಾಗಿದ್ದು ಶ್ರದ್ಧಾಪೂರ್ವಕವಾಗಿ ಉಪಾಸಿಸುವವರು ನನಗೆ ಅತಿಶಯ ಪ್ರಿಯರಾದ ಭಕ್ತರು. ೨೦

ಓಂ ತತ್ಸತ್

ಈ ಪ್ರಕಾರ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯವು ಸಮಾಪ್ತವಾದುದು.

—:o:—

೧೩

# ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗ



ಈ ಅಧ್ಯಾಯದಲ್ಲಿ ಶರೀರ ಮತ್ತು ಶರೀರಿ, ಈ ಅಂಶಗಳ ಭೇದವು ತೋರಿಸಲ್ಪಟ್ಟಿದೆ.

ಅರ್ಜುನ ಉವಾಚ—

ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ
ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ

[ಅರ್ಜುನನೆಂದನು—

ಎಲೈ ಕೇಶವನೆ, ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ, ಜ್ಞೇಯ, ಇವುಗಳೇನೆಂಬುದನ್ನು ತಿಳಿಯಲಿಚ್ಛಿಸುತ್ತೇನೆ.೧]

೧

ಶ್ರೀಭಗವಾನುವಾಚ—

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ
ಏತದ್ಯೋ ವೇತ್ತಿ ತಂ ಪ್ರಾಹುಃಕ್ಷೇತ್ರಜ್ಞ ಇತಿ ತದ್ವಿದಃ

ಶ್ರೀ ಭಗವಂತನು ಹೇಳಿದನು—

ಎಲೈ ಕೌಂತೇಯನೆ, ಈ ಶರೀರವು ಕ್ಷೇತ್ರವೆಂದೆಣಿಸಿಕೊಳ್ಳುತ್ತದೆ. ಮತ್ತು ಇದನ್ನರಿತವನನ್ನು ತತ್ವಜ್ಞಾನಿಗಳು ಕ್ಷೇತ್ರಜ್ಞನೆಂದು ಕರೆಯುತ್ತಾರೆ. ೨

---

೧ ಈ ಮೊದಲನೆಯ ಶ್ಲೋಕವು ಯಾವ ಕಾರಣದಿಂದಲೋ ಮೂಲದಲ್ಲಿ ಬಿಟ್ಟುಹೋಗಿದೆ. ಉಳಿದ ಶ್ಲೋಕಗಳ ಸಂಖ್ಯೆಗಳನ್ನು ಒಂದೊಂದು ಕಡಿಮೆಯಾಗಿ ಕೊಟ್ಟಿದ್ದಾರೆ ಈ ಭಾಷಾಂತರದಲ್ಲಿ ತಿದ್ದಲಾಗಿದೆ.

—ಅನುವಾದಕರು.

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ

ಮತ್ತು ಎಲೈ ಭಾರತನೆ, ಸಮಸ್ತ ಕ್ಷೇತ್ರಗಳಲ್ಲಿ—ಶರೀರಗಳಲ್ಲಿ—ಇರುವ ನನ್ನನ್ನು ಕ್ಷೇತ್ರಜ್ಞನೆಂದು ತಿಳಿ. ಕ್ಷೇತ್ರ ಮತ್ತು ಕ್ಷೇತ್ರಜ್ಞ, ಇವುಗಳ ಭೇದದ ಜ್ಞಾನವೇ ಜ್ಞಾನವು. ನನ್ನ ಮತವು ಹೀಗೆ. ೩

ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು

ಈ ಕ್ಷೇತ್ರವೆಂಬುದೇನು, ಅದಿರುವದೆಂತು, ಅದು ಹೇಗೆ ವಿಕಾರಗೊಳ್ಳುವುದು, ಕ್ಷೇತ್ರಜ್ಞನು ಯಾರು, ಅವನ ಶಕ್ತಿಯೇನು—ಇದನ್ನು ನನ್ನಿಂದ ಸಂಕ್ಷೇಪವಾಗಿ ಕೇಳು. ೪

ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ

ವಿವಿಧ ಛಂದಸ್ಸುಗಳಲ್ಲಿ, ಭಿನ್ನ ಭಿನ್ನ ಪ್ರಕಾರವಾಗಿ ಮತ್ತು ಉದಾಹರಣೆಯುಕ್ತಿಗಳ ಮೂಲಕ, ನಿಶ್ಚಯಾತ್ಮಕ ಬ್ರಹ್ಮಸೂಚಕ ವಾಕ್ಯಗಳಲ್ಲಿ ಋಷಿಗಳು ಈ ವಿಷಯವನ್ನು [ಕುರಿತು] ಬಹುವಾಗಿ ಹಾಡಿದ್ದಾರೆ. ೫

ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ
ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ

ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ
ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್

ಮಹಾಭೂತಗಳು, ಅಹಂಕಾರ, ಬುದ್ಧಿ, ಪ್ರಕೃತಿ, ಹತ್ತು ಇಂದ್ರಿಯಗಳು, ಒಂದು ಮನಸ್ಸು, ಐದು ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನಶಕ್ತಿ, ಧೃತಿ—ಇದು ತನ್ನ ವಿಕಾರಗಳೊಡನೆ ಕ್ಷೇತ್ರವೆನಿಸುವುದು. ೬-೭

**ಟಿಪ್ಪಣಿ**— ಮಹಾಭೂತಗಳು ಐದು ಪೃಥ್ವಿ, ಜಲ, ತೇಜಸ್ಸು, ವಾಯು ಮತ್ತು ಆಕಾಶ. ಅಹಂಕಾರವೆಂದರೆ ಶರೀರ ಸಂಬಂಧವಾಗಿ ಇರುವ ಅಹಂಭಾವ. ಅವ್ಯಕ್ತವೆಂದರೆ ಅದೃಶ್ಯವಾಗಿ ಇರುವ ಮಾಯಾ, ಪ್ರಕೃತಿ ಹತ್ತು ಇಂದ್ರಿಯಗಳಲ್ಲಿ ಐದು ಜ್ಞಾನೇಂದ್ರಿಯಗಳು ಮೂಗು, ಕಿವಿ, ಕಣ್ಣು, ನಾಲಗೆ ಮತ್ತು ಚರ್ಮ; ಹಾಗೆಯೇ ಐದು ಕರ್ಮೇಂದ್ರಿಯಗಳು—ಕೈ, ಕಾಲು, ಮುಖ ಮತ್ತು ಎರಡು ಗುಹ್ಯೇಂದ್ರಿಯಗಳು. ಐದು ಗೋಚರ ಅಥವಾ ಐದು ಜ್ಞಾನೇಂದ್ರಿಯಗಳಿಗೆ ಐದು ವಿಷಯಗಳು— ಮೂಸಿನೋಡುವದು, ಕೇಳುವದು, ನೋಡುವದು, ರುಚಿನೋಡುವದು ಮತ್ತು ಸ್ಪರ್ಶಿಸುವದು. ಸಂಘಾತವೆಂದರೆ ಶರೀರದ ತತ್ವಗಳು ಪರಸ್ಪರ ಸಹಯೋಗಗೈವ ಶಕ್ತಿ. ಧೃತಿಯೆಂದರೆ ಧೈರ್ಯ ರೂಪಿಯಾದ ಸೂಕ್ಷ್ಮಗುಣವಲ್ಲ; ಅದು ಈ ಶರೀರದ ಪರಮಾಣುಗಳು ಒಂದರೊಡನೊಂದು ಅಂಟಿಕೊಂಡು ಇರುವ ಗುಣ. ಈ ಗುಣವು ಅಹಂಭಾವದ ಕಾರಣವೇ ಇರುವದು, ಮತ್ತು ಈ ಅಹಂಭಾವವು ಅವ್ಯಕ್ತ ಪ್ರಕೃತಿಯಲ್ಲಿ ಇರುತ್ತದೆ. ಈ ಅಹಂಭಾವವನ್ನು ಅಮೂರ್ಖನಾದ [ವಿವೇಕಗೆಡದ] ಮನುಷ್ಯನು ಜ್ಞಾನಪೂರ್ವಕವಾಗಿ ತ್ಯಜಿಸುತ್ತಾನೆ ಮತ್ತು ಈ ಕಾರಣದಿಂದ ಮೃತ್ಯುಸಮಯದಲ್ಲಿ ಅಥವಾ ಇತರೇತರ ಆಘಾತಗಳಿಂದ ಅವನಿಗೆ ದುಃಖಪ್ರದವಾಗುವದಿಲ್ಲ. ಜ್ಞಾನಿಗಳು, ಅಜ್ಞಾನಿಗಳು, ಎಲ್ಲರಿಗೂ ಕೊನೆಯಲ್ಲಂತು ಈ ವಿಕಾರಸಹಿತವಾದ ಕ್ಷೇತ್ರವನ್ನು ತ್ಯಜಿಸಿಯೇ ಮೋಕ್ಷವುಂಟು.

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ

ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ

ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು

ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ

ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ

ಗರ್ವವಿಲ್ಲದಿರುವಿಕೆ, ದಂಭವಿಲ್ಲದಿರುವಿಕೆ, ಅಹಿಂಸೆ, ಕ್ಷಮೆ, ಸರಳತೆ, ಆಚಾರ್ಯರ ಸೇವೆ, ಶುದ್ಧತೆ, ಸ್ಥೈರ್ಯ, ಆತ್ಮಸಂ

ಯಮ, ಇಂದ್ರಿಯಗಳ ವಿಷಯ [ವಸ್ತು] ಗಳಲ್ಲಿ ವೈರಾಗ್ಯ, ಅಹಂಕಾರವಿಲ್ಲದಿರುವಿಕೆ, ಹುಟ್ಟು, ಸಾವು, ಮುಪ್ಪು, ಜಡ್ಡು, ದುಃಖ ಮತ್ತು ದೋಷಗಳ ನಿರಂತರ ಅರಿವು, ಮಕ್ಕಳು, ಹೆಂಡತಿ, ಮನೆ, ಮುಂತಾದವುಗಳಲ್ಲಿ ಮೋಹದ ಮತ್ತು ಮಮತೆಯ ಅಭಾವ, ಪ್ರಿಯವಾದುದರಲ್ಲಿಯೂ ಅಪ್ರಿಯವಾದುದರಲ್ಲಿಯೂ ಸದಾ ಸಮಭಾವ, ನನ್ನಲ್ಲಿ ಅನನ್ಯ, ಧ್ಯಾನಪೂರ್ವಕ, ಏಕನಿಷ್ಠೆಯ, ಭಕ್ತಿ, ಏಕಾಂತ ಸ್ಥಾನದ ಸೇವನೆ, ಜನಸಮೂಹದಲ್ಲಿ ಸೇರಲು ಇಚ್ಛೆಯಿಲ್ಲದಿರುವಿಕೆ, ಆಧ್ಯಾತ್ಮಿಕ ಜ್ಞಾನದ ನಿತ್ಯತೆಯ ಅರಿವು ಮತ್ತು ಆತ್ಮದರ್ಶನ, ಇದೆಲ್ಲಕ್ಕೂ ಜ್ಞಾನವೆಂದು ಹೆಸರು. ಇದನ್ನು ವಿರೋಧಿಸಿದುದು ಅಜ್ಞಾನವು. ೮-೧೨

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ

ಯಾವುದನ್ನರಿತವರು ಮೋಕ್ಷವನ್ನು ಪಡೆವರೋ ಆ ಜ್ಞೇಯವೇನೆಂಬುದನ್ನು ನಿನಗೆ ಹೇಳುವೆನು. ಅದು ಅನಾದಿಯಾದ ಪರಬ್ರಹ್ಮವು; ಅದನ್ನು ಸತ್ ಎಂದೂ ಹೇಳಲಾಗುವದಿಲ್ಲ, ಅಸತ್ ಎಂದೂ ಹೇಳಲಾಗುವದಿಲ್ಲ. ೧೩

ಟಿಪ್ಪಣಿ—ಈಶ್ವರನನ್ನು ಸತ್ ಎಂದಾಗಲಿ ಅಸತ್ ಎಂದಾಗಲಿ ಹೇಳಲಾಗುವದಿಲ್ಲ. ಯಾವೊಂದು ಶಬ್ದದಿಂದಲೂ ಅವನ ವ್ಯಾಖ್ಯಾನವಾಗಲಿ ಪರಿಚಯವಾಗಲಿ ಆಗಲು ಸಾಧ್ಯವಿಲ್ಲ. ಹೀಗಿರುವ ಅವನು ಗುಣಾತೀತ ಸ್ವರೂಪನು.

ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿಶಿರೋಮುಖಂ
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ

ಎಲ್ಲಿ ನೋಡಿದರಲ್ಲಿ ಅದಕ್ಕೆ ಕೈ, ಕಾಲು, ಕಣ್ಣು, ತಲೆ, ಬಾಯಿ, ಕಿವಿ, ಇವೆ. ಎಲ್ಲ ಕಡೆಯೂ ವ್ಯಾಪ್ತವಾಗಿ ಅದು ಈ ಲೋಕದಲ್ಲಿ ಇದೆ. ೧೪

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ

ಎಲ್ಲಾ ಇಂದ್ರಿಯಗಳ ಗುಣಗಳ ಅಂಶವೂ ಅದರಲ್ಲಿ ದೊರಕು ತ್ತದೆ. ಆದರೂ ಆ ಸ್ವರೂಪವು ಇಂದ್ರಿಯರಹಿತವಾಗಿಯೂ ಯಾವದರ ಅಂಟೂ ಇಲ್ಲದೆಯೂ, ಆದರೂ ಎಲ್ಲವನ್ನೂ ರಕ್ಷಿಸುವ ದಾಗಿಯೂ, ಇದೆ; ಅದು ಗುಣರಹಿತವಾದರೂ ಗುಣಗಳನ್ನು ಭೋಗಿ ಸುವದಾಗಿದೆ. ೧೫

ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್

ಅದು ಭೂತಗಳ ಹೊರಗೂ ಇದೆ, ಒಳಗೂ ಇದೆ. ಅದು ಚಲನವುಳ್ಳದಾಗಿಯೂ ಇದೆ, ಸ್ಥಿರವಾಗಿಯೂ ಇದೆ. ಸೂಕ್ಷ್ಮವಾ ಗಿರುವ ಕಾರಣ ಅದು ಅವಿಜ್ಞೇಯವಾದುದಾಗಿದೆ. ಅದು ದೂರ ವಾಗಿ[ಯೂ] ಇದೆ, ಸಮೀಪವಾಗಿ[ಯೂ] ಇದೆ. ೧೬

ಟಿಪ್ಪಣಿ—ಯಾರು ಅದನ್ನು ಗುರುತಿಸುವರೊ ಅವರು ಅದರೊಳಗಿದ್ದಾರೆ. ಚಲನೆಯನ್ನೂ, ಸ್ಥಿರತೆಯನ್ನೂ, ಶಾಂತಿಯನ್ನೂ, ಅಶಾಂತಿಯನ್ನೂ, ನಾವು ಅನುಭವಿ ಸುತ್ತೇವೆ. [ಈ] ಎಲ್ಲಾ ಭಾವಗಳೂ ಅದರೊಳಗಿಂದಲೇ ಉತ್ಪನ್ನವಾಗುವದ ರಿಂದ ಅದು ಚಲನವುಳ್ಳದಾಗಿಯೂ ಸ್ಥಿರವಾಗಿಯೂ ಇದೆ.

ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ

ಭೂತಗಳಲ್ಲಿ ಅದು ಅವಿಭಕ್ತವಾಗಿದೆ; ವಿಭಕ್ತವಾಗಿದ್ದಂ ತೆಯೂ ಇದೆ. ಆ ತಿಳಿದುಕೊಳ್ಳಲರ್ಹವಾದ (ಬ್ರಹ್ಮವು) ಪ್ರಾಣಿ ಗಳ ಪಾಲಕನಾಗಿಯೂ, ನಾಶಕನಾಗಿಯೂ, ಕರ್ತೃವಾಗಿಯೂ ಇದೆ. ೧೭

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಧಿಷ್ಠಿತಮ್

ಅದು ಜ್ಯೋತಿಗಳಿಗೆ ಕೂಡ ಜ್ಯೋತಿಯು; ಅದು ಅಂಧಕಾರ ವನ್ನು ಮೀರಿದುದೆಂದೆನಿಸಿಕೊಳ್ಳುತ್ತದೆ. ಜ್ಞಾನವು ಅದೇ, ತಿಳಿದು

ಕೊಳ್ಳಲು ಯೋಗ್ಯವಾದುದು ಅದೇ, ಮತ್ತು ಜ್ಞಾನದಿಂದ ಪ್ರಾಪ್ತವಾಗುವದೂ ಅದೇ. ಅದು ಎಲ್ಲರ ಹೃದಯದಲ್ಲಿಯೂ ನೆಲೆಸಿದೆ. ೧೮

ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ

ಈ ರೀತಿಯಾಗಿ ನಾನು ಕ್ಷೇತ್ರ, ಜ್ಞಾನ ಮತ್ತು ಜ್ಞೇಯ, ಇವುಗಳನ್ನು ಕುರಿತು ಸಂಕ್ಷೇಪವಾಗಿ ವಿವರಿಸಿದೆನು. ಅದನ್ನರಿತು ನನ್ನ ಭಕ್ತನು ನನ್ನ ಭಾವವನ್ನು ಪಡೆಯಲು ಯೋಗ್ಯನಾಗುತ್ತಾನೆ. ೧೯

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್

ಪ್ರಕೃತಿ ಮತ್ತು ಪುರುಷ, ಇವೆರಡೂ ಅನಾದಿಯೆಂದು ತಿಳಿ. ವಿಕಾರಗಳೂ ಗುಣಗಳೂ ಪ್ರಕೃತಿಯಿಂದ ಹುಟ್ಟುವುವೆಂದು ತಿಳಿ. ೨೦

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ

ಕಾರ್ಯ ಮತ್ತು ಕಾರಣದ ಹೇತುವು ಪ್ರಕೃತಿಯೆಂದು ಹೇಳುತ್ತಾರೆ. ಮತ್ತು ಸುಖದುಃಖಗಳ ಭೋಗದಲ್ಲಿ ಹೇತುವು ಪುರುಷನೆಂದು ಹೇಳುತ್ತಾರೆ. ೨೧

ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು

ಪ್ರಕೃತಿಸ್ಥನಾದ ಪುರುಷನು ಪ್ರಕೃತಿಯಿಂದ ಉತ್ಪನ್ನವಾಗುವ ಗುಣಗಳನ್ನು ಭೋಗಿಸುತ್ತಾನೆ ಮತ್ತು ಈ ಗುಣಸಂಗವೇ ಒಳ್ಳೆಯ ಅಥವಾ ಕೆಟ್ಟ ಯೋನಿಯಲ್ಲಿ ಅವನು ಹುಟ್ಟಲು ಕಾರಣವಾಗುತ್ತದೆ. ೨೨

ಟಿಪ್ಪಣಿ—ಪ್ರಕೃತಿಯನ್ನು ನಾವು ಲೌಕಿಕ ಭಾಷೆಯಲ್ಲಿ ಮಾಯೆಯೆಂಬ ಹೆಸರಿನಿಂದ ಕರೆಯುತ್ತೇವೆ. ಪುರುಷನೆಂದರೆ ಜೀವ. ಮಾಯೆಗೆ, ಎಂದರೆ ಮೂಲ

ಸ್ವಭಾವಕ್ಕೆ, ವಶೀಭೂತವಾದ ಜೀವವು ಸತ್ವ, ರಜಸ್ಸು ಅಥವಾ ತಮಸ್ಸು, ಇವು ಗಳಲ್ಲಿ ಒಂದಾಗುವ ಕಾರ್ಯಗಳ ಫಲವನ್ನು ಭೋಗಿಸುತ್ತದೆ, ಮತ್ತು ಇದರಿಂದ ಕರ್ಮಾನುಸಾರ ಪುನರ್ಜನ್ಮವನ್ನು ಪಡೆಯುತ್ತದೆ.

ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಸ್ಮಿನ್ಪುರುಷಃ ಪರಃ

ಈ ದೇಹದಲ್ಲಿರುವ ಪರಮಪುರುಷನು ಸರ್ವಸಾಕ್ಷಿಯೆಂದೂ, ಅನುಮತಿ ಕೊಡುವವನೆಂದೂ, ರಕ್ಷಕನೆಂದೂ, ಭೋಗಿಸುವ ವನೆಂದೂ, ಮಹೇಶ್ವರನೆಂದೂ, ಪರಮಾತ್ಮನೆಂದೂ ಕರೆಯಲ್ಪಡು ತ್ತಾನೆ. ೨೨

ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ
ಸರ್ವಥಾ ವರ್ತಮಾನೋಪಿ ನ ಸ ಭೂಯೋಭಿಜಾಯತೇ

ಈ ರೀತಿಯಾಗಿ ಪುರುಷನನ್ನೂ ಗುಣಮಯ ಪ್ರಕೃತಿಯನ್ನೂ ಅರಿತ ಮನುಷ್ಯನು ಸರ್ವಪ್ರಕಾರದಿಂದ ಕಾರ್ಯಗೈಯುತ್ತಿದ್ದರೂ ಮರಳಿ ಹುಟ್ಟನ್ನು ಪಡೆಯುವದಿಲ್ಲ. ೨೪

ಟಿಪ್ಪಣಿ —ಈ ಶ್ಲೋಕವು ಭಕ್ತಿಯ ಮಹಿಮೆಯನ್ನು ಸೂಚಿಸುವುದೇ ಹೊರತು ಸ್ವೇಚ್ಛಾಚಾರವನ್ನು ಸಮರ್ಥಿಸುವದಿಲ್ಲವೆಂಬುದು ನಮಗೆ ೨, ೯, ೧೨ ಮತ್ತು ಇತರೇತರ ಅಧ್ಯಾಯಗಳ ಸಹಾಯದಿಂದ ಗೊತ್ತಾಗುತ್ತದೆ. ಸಕಲ ಕರ್ಮಗಳೂ ಜೀವನಿಗೆ ಬಂಧನಗೈಯುತ್ತವೆ. ಆದರೆ ಅವನು ಎಲ್ಲಾ ಕರ್ಮ ಗಳನ್ನೂ ಪರಮಾತ್ಮನಿಗೆ ಅರ್ಪಿಸಿಬಿಟ್ಟರೆ ಅವನು ಬಂಧನಮುಕ್ತನಾಗಿಬಿಡುತ್ತಾನೆ. ಮತ್ತು ಈ ರೀತಿ ಕರ್ತೃತ್ವಸ್ವರೂಪದ ಅಹಂಭಾವವನ್ನು ನೀಗಿಕೊಂಡು ಇಪ್ಪತ್ತು ನಾಲ್ಕು ತಾಸೂ ಅಂತರ್ಯಾಮಿಯನ್ನು ಗುರುತಿಸುತ್ತಿರುವವನು ಪಾಪಕರ್ಮವನ್ನು ಮಾಡಲೇಲಾರನು ಪಾಪದ ಮೂಲವೇ ಅಭಿಮಾನ. ಎಲ್ಲಿ 'ನಾನು' ಎಂಬು ದಿಲ್ಲವೊ ಅಲ್ಲಿ ಪಾಪವಿಲ್ಲ. ಈ ಶ್ಲೋಕವು ಪಾಪಕರ್ಮವೆಸಗದಿರುವ ಉಪಾಯ ವನ್ನು ತೋರಿಸಿಕೊಡುತ್ತದೆ

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ

ಕೆಲವರು ಧ್ಯಾನಮಾರ್ಗದಿಂದ ಆತ್ಮದ ಮೂಲಕ ಆತ್ಮವನ್ನು ತಮ್ಮಲ್ಲಿ ಕಾಣುತ್ತಾರೆ. ಎಷ್ಟೋ ಮಂದಿ ಜ್ಞಾನಮಾರ್ಗದಿಂದಲೂ ಉಳಿದ ಕೆಲವರು ಕರ್ಮಮಾರ್ಗದಿಂದಲೂ [ಆತ್ಮವನ್ನು ತಮ್ಮಲ್ಲಿ ಕಾಣುತ್ತಾರೆ]. ೨೪

ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ

ಮತ್ತೂ ಕೆಲವರು ಈ ಮಾರ್ಗಗಳನ್ನರಿಯದುದರಿಂದ ಇತರರಿಂದ ಪರಮಾತ್ಮನ ವಿಷಯವನ್ನು ಕೇಳಿ, ಕೇಳಿದುದರಲ್ಲಿ ಶ್ರದ್ಧೆಯಿಟ್ಟು, ಅದರಲ್ಲಿ ಪರಾಯಣರಾಗಿದ್ದು ಉಪಾಸನೆ ಮಾಡುತ್ತಾರೆ. ಅವರು ಕೂಡ ಮೃತ್ಯುವಿನಿಂದ ಪಾರಾಗುತ್ತಾರೆ. ೨೫

ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಂ
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ

ಚಲಿಸುವ ಅಥವಾ ಚಲಿಸದಿರುವ ಯಾವ ಯಾವ ವಸ್ತುವು ಹುಟ್ಟುವುದೊ ಅದೆಲ್ಲಾ, ಹೇ ಭರತರ್ಷಭ, ಕ್ಷೇತ್ರ ಮತ್ತು ಕ್ಷೇತ್ರಜ್ಞರ, ಎಂದರೆ ಪ್ರಕೃತಿ ಮತ್ತು ಪುರುಷರ, ಸಂಯೋಗದಿಂದ ಉತ್ಪನ್ನವಾಗುವುದೆಂದು ತಿಳಿ. ೨೬

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ

ಸಮಸ್ತ ನಾಶವಂತ ಪ್ರಾಣಿಗಳಲ್ಲಿಯೂ ಅವಿನಾಶಿಯಾದ ಪರಮೇಶ್ವರನು ಸಮಭಾವದಿಂದಿರುವದನ್ನು ತಿಳಿದವನೇ ಅವನನ್ನು [ಪರಮೇಶ್ವರನನ್ನು] ತಿಳಿದವನಾಗಿರುತ್ತಾನೆ. ೨೭

ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಂ
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಂ

ಈಶ್ವರನು ಎಲ್ಲಾ ಕಡೆಯೂ ಸಮಭಾವದಿಂದಿರುವದನ್ನು ನೋಡುವ ಮನುಷ್ಯನು ತನ್ನನ್ನು ತಾನು ಘಾತಗೊಳಿಸುವದಿಲ್ಲ. ಮತ್ತು ಇದರಿಂದ ಅವನು ಪರಮಗತಿಯನ್ನೈದುತ್ತಾನೆ. ೨೮

ಟಿಪ್ಪಣಿ—ಸಮಭಾವದಿಂದಿರುವ ಈಶ್ವರನನ್ನು ನೋಡುವವನು ತಾನೇ ಅವನಲ್ಲಿ ವಿಲೀನನಾಗಿಬಿಡುತ್ತಾನೆ; ಇನ್ನೇನನ್ನೂ ನೋಡುವದಿಲ್ಲ. ಇದರಿಂದ ವಿಕಾರವಶನಾಗದೆ ಮೋಕ್ಷವನ್ನು ಪಡೆಯುತ್ತಾನೆ; [ತಾನೇ] ತನ್ನ ಶತ್ರುವಾಗುವದಿಲ್ಲ.

ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ
ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ

ಎಲ್ಲೆಡೆಯೂ ಪ್ರಕೃತಿಯೇ ಕರ್ಮ ಮಾಡುತ್ತದೆಯೆಂದು ತಿಳಿದು, ಇದರಿಂದಲೇ ಆತ್ಮವು ಕರ್ತೃವಲ್ಲವೆಂದು ಅರಿತಿರುವವನೇ [ನಿಜವಾಗಿ] ಅರಿವುಳ್ಳವನು. ೨೦

ಟಿಪ್ಪಣಿ—ಹೇಗೆಂದರೆ, ನಿದ್ರೆ ಮಾಡುತ್ತಿರುವ ಮನುಷ್ಯನ ಆತ್ಮವು ನಿದ್ರೆಯ ಕರ್ತೃವಲ್ಲ; ಪ್ರಕೃತಿಯು ನಿದ್ರೆಯ ಕರ್ಮವನ್ನು ಮಾಡುತ್ತದೆ. ನಿರ್ವಿಕಾರ ಮನುಷ್ಯನ ಕಣ್ಣುಗಳು ಯಾವ ಕೊಳಕನ್ನೂ ನೋಡಲಾರವು. ಪ್ರಕೃತಿಯು ವ್ಯಭಿಚಾರಿಣಿಯಲ್ಲ. ಅಭಿಮಾನಿಯಾದ ಪುರುಷನು ಅದರ ಸ್ವಾಮಿಯಾದಾಗ ಅದರ ಸಂಗದಿಂದ ವಿಷಯವಿಕಾರಗಳು ಉತ್ಪನ್ನವಾಗುತ್ತವೆ.

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ

ಅವನು ಜೀವಗಳ ಇರುವಿಕೆಯು ಒಂದರಿಂದೊಂದು ಬೇರೆಯಾದರೂ ಒಂದರಲ್ಲಿಯೇ ಸ್ಥಿತವಾಗಿರುವದನ್ನು ಕಂಡು, ಈ ಕಾರಣದಿಂದ ವಿಸ್ತಾರವೆಲ್ಲವೂ ಅದರಿಂದಲೇ ಉತ್ಪನ್ನವಾದುದೆಂದು ತಿಳಿದುಕೊಂಡಾಗ ಬ್ರಹ್ಮವನ್ನು ಪಡೆಯುತ್ತಾನೆ. ೨೧

ಟಿಪ್ಪಣಿ—ಅನುಭವದಿಂದ ಎಲ್ಲವನ್ನೂ ಬ್ರಹ್ಮದಲ್ಲಿಯೇ ಕಾಣುವದೇ ಬ್ರಹ್ಮವನ್ನು ಪಡೆಯುವದು. ಆಗ ಜೀವವು ಶಿವನಿಂದ ಬೇರೆಯಿರಲಾಗುವದಿಲ್ಲ.

ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ

ಎಲೈ ಕೌಂತೇಯನೆ, ಈ ಅವಿನಾಶಿಯಾದ ಪರಮಾತ್ಮನು ಅನಾದಿಯೂ ನಿರ್ಗುಣನೂ ಆದಕಾರಣ ಶರೀರದಲ್ಲಿದ್ದರೂ ಏನೂ ಮಾಡುವದಿಲ್ಲ, ಯಾವ ಅಂಟಿಗೂ ಸಿಕ್ಕುವದಿಲ್ಲ. ೨೨

ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ
ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ

ಸರ್ವವ್ಯಾಪಿಯಾದ ಆಕಾಶವು ಸೂಕ್ಷ್ಮವಾಗಿರುವದರಿಂದ ಅದು ಅಲಿಪ್ತವಾಗಿರುವಂತೆಯೇ ಆತ್ಮವು ಎಲ್ಲಾ ದೇಹಗಳಲ್ಲಿದ್ದರೂ ಅಲಿಪ್ತವಾಗಿದೆ. ೩೨

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ

ಒಬ್ಬನೇ ಸೂರ್ಯನು ಇಡೀ ಜಗತ್ತಿಗೆ ಪ್ರಕಾಶಕೊಡುವಂತೆಯೇ, ಹೇ ಭಾರತ, ಕ್ಷೇತ್ರಿಯು ಕ್ಷೇತ್ರಕ್ಕೆಲ್ಲಾ ಪ್ರಕಾಶವೀಯುತ್ತಾನೆ. ೩೩

ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ

ಜ್ಞಾನಚಕ್ಷುವಿನ ಮೂಲಕ ಕ್ಷೇತ್ರ-ಕ್ಷೇತ್ರಜ್ಞರ ಭೇದವನ್ನೂ ಪ್ರಕೃತಿಯ ಬಂಧನದಿಂದ ಪ್ರಾಣಿಗಳಿಗೆ ಮುಕ್ತಿಯು ಹೇಗೆ ಒದಗುವದೆಂಬುದನ್ನೂ ತಿಳಿದವನು ಬ್ರಹ್ಮವನ್ನೈದುತ್ತಾನೆ. ೩೪

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅಥವಾ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀ ಕೃಷ್ಣಾರ್ಜುನಸಂವಾದದ ಕ್ಷೇತ್ರಕ್ಷೇತ್ರಜ್ಞವಿಭಾಗಯೋಗವೆಂಬ ಹದಿಮೂರನೆಯ ಅಧ್ಯಾಯವು ಸಮಾಪ್ತವಾದುದು.



೧೪

# ಗುಣತ್ರಯವಿಭಾಗಯೋಗ



ಗುಣಮಯವಾದ ಪ್ರಕೃತಿಯ ಸ್ವಲ್ಪ ಪರಿಚಯವನ್ನು ಮಾಡಿಕೊಟ್ಟ ಮೇಲೆ ಸಹಜವಾಗಿಯೇ ಮೂರು ಗುಣಗಳ ವರ್ಣನೆಯು ಈ ಅಧ್ಯಾಯದಲ್ಲಿ ಬರುತ್ತದೆ. ಮತ್ತು ಇದನ್ನು ವರ್ಣಿಸುತ್ತಾ ಗುಣಾತೀತನ ಲಕ್ಷಣಗಳನ್ನು ಭಗವಂತನು ಎಣಿಸುತ್ತಾನೆ. ಎರಡನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳೂ, ಹನ್ನೆರಡನೆಯದರಲ್ಲಿ ಭಕ್ತನವೂ ಕಾಣಬರುವಂತೆ ಇದರಲ್ಲಿ ಗುಣಾತೀತನ ಲಕ್ಷಣಗಳು ಕಾಣಬರುತ್ತವೆ.

ಶ್ರೀ ಭಗವಾನುವಾಚ—

ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ
ಯಜ್ಜ್ಞಾತ್ವಾ ಮುನಯಃ ಸರ್ವೇಃ ಪರಾಂ ಸಿದ್ಧಿಮಿತೋ ಗತಾಃ

ಶ್ರೀ ಭಗವಂತನು ಹೇಳಿದನು—

ಜ್ಞಾನಗಳಲ್ಲಿ ಯಾವ ಉತ್ತಮ ಜ್ಞಾನದ ಅನುಭವವನ್ನು ಹೊಂದಿ ಸಕಲ ಮುನಿಗಳೂ ಈ ಶರೀರವನ್ನು ತ್ಯಜಿಸಿದ ಮೇಲೆ

ಪರಮಶಾಂತಿಯನ್ನು ಪಡೆದಿದ್ದಾರೊ ಅದನ್ನು ನಾನು ನಿನಗೆ ಪುನಃ ಹೇಳುವೆನು ೧

ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ

ಈ ಜ್ಞಾನವನ್ನಾಶ್ರಯಿಸಿ ಯಾರು ನನ್ನ ಭಾವವನ್ನು ಪಡೆದಿರುವರೊ ಅವರಿಗೆ ಉತ್ಪತ್ತಿಕಾಲದಲ್ಲಿ ಹುಟ್ಟುವ ಕೆಲಸವಿರುವದಿಲ್ಲ ಮತ್ತು ಪ್ರಳಯಕಾಲದಲ್ಲಿ ವ್ಯಥೆಗೊಳ್ಳುವ ಕೆಲಸವಿರುವದಿಲ್ಲ. ೨

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ

ಎಲೈ ಭಾರತನೆ, ಮಹದ್ಬ್ರಹ್ಮವು, ಎಂದರೆ ಪ್ರಕೃತಿಯು, ನನ್ನ ಯೋನಿಯಾಗಿದೆ. ಅದರಲ್ಲಿ ನಾನು ಗರ್ಭಾಧಾನಗೈಯುತ್ತೇನೆ. ಅದರಿಂದ ಸಮಸ್ತ ಪ್ರಾಣಿಗಳ ಉತ್ಪತ್ತಿಯಾಗುತ್ತದೆ ೩

ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ

ಎಲೈ ಕೌಂತೇಯನೆ, ಸಮಸ್ತ ಯೋನಿಗಳಲ್ಲಿ ಯಾವ ಯಾವ ಪ್ರಾಣಿಗಳ ಉತ್ಪತ್ತಿಯಾಗುವದೊ ಅವುಗಳ ಉತ್ಪತ್ತಿಸ್ಥಾನವು ನನ್ನ ಪ್ರಕೃತಿಯು ಮತ್ತು ಅದರಲ್ಲಿ ಬೀಜಾರೋಪಣಮಾಡುವ ತಂದೆಯು— ಪುರುಷನು—ನಾನು. ೪

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್

ಎಲೈ ಮಹಾಬಾಹುವೆ, ಸತ್ತ್ವ, ರಜಸ್ಸು, ಮತ್ತು ತಮಸ್ಸು ಪ್ರಕೃತಿಯಿಂದ ಉತ್ಪನ್ನವಾಗುವ ಗುಣಗಳು. ಅವು ಅವಿನಾಶಿಯಾದ ದೇಹಧಾರಿಯನ್ನು--ಜೀವವನ್ನು--ದೇಹಕ್ಕೆ ಬಂಧಿಸುತ್ತವೆ. ೫

ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಂ
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ

ಇವುಗಳಲ್ಲಿ ಸತ್ವಗುಣವು ನಿರ್ಮಲವಾದುದರಿಂದ ಪ್ರಕಾಶ ಮಾನವಾಗಿಯೂ ಆರೋಗ್ಯಕರವಾಗಿಯೂ ಇದೆ. ಮತ್ತು ಎಲೈ ಪಾಪವಿಲ್ಲದವನೆ, ಅದು ದೇಹಿಯನ್ನು ಸುಖದ ಮತ್ತು ಜ್ಞಾನದ ಸಂಬಂಧದಲ್ಲಿ ಬಂಧಿಸುತ್ತದೆ. ೬

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ

ಎಲೈ ಕೌಂತೇಯನೆ, ರಜೋಗುಣವು ರಾಗರೂಪವುಳ್ಳದಾಗ ಕಾರಣ ಆಸೆಗೂ ಆಸಕ್ತಿಗೂ ಮೂಲವಾಗಿದೆ. ಅದು ದೇಹಧಾರಿಯನ್ನು ಕರ್ಮಪಾಶದಲ್ಲಿ ಕಟ್ಟುತ್ತದೆ. ೭

ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ

ಹೇ ಭಾರತ, ತಮೋಗುಣವು ಅಜ್ಞಾನದಿಂದ ಹುಟ್ಟುವದು, ಅದು ಎಲ್ಲಾ ದೇಹಧಾರಿಗಳನ್ನೂ ಮೋಹದಲ್ಲಿ ಬೀಳಿಸುತ್ತದೆ. ಮತ್ತು ಅದು ದೇಹಿಯನ್ನು ಅಸಾವಧಾನ, ಆಲಸ್ಯ ಮತ್ತು ನಿದ್ರೆ, ಇವುಗಳ ಪಾಶದಲ್ಲಿ ಕಟ್ಟುತ್ತದೆ. ೮

ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ
ಜ್ಞಾನಮಾವೃತ್ಯತು ತಮಃ ಪ್ರಮಾದೇ ಸಂಜಯತ್ಯುತ

ಹೇ ಭಾರತ, ಸತ್ತ್ವವು ಆತ್ಮಕ್ಕೆ ಶಾಂತಿಸುಖದ ಸಂಗವನ್ನು ಉಂಟುಮಾಡುತ್ತದೆ; ರಜಸ್ಸು ಕರ್ಮವನ್ನೂ ತಮಸ್ಸು ಜ್ಞಾನವನ್ನೂ ಬಿಚ್ಚಿ ಪ್ರಮಾದದ ಸಂಗವನ್ನು ಉಂಟುಮಾಡುತ್ತದೆ. ೯

ರಜಸ್ತಮಾಶ್ಚಾಭಿಭೂಯ ಸತ್ವಂ ಭವತಿ ಭಾರತ
ರಜಃ ಸತ್ವಂ ತಮಶ್ಚೈವ ತಮಃ ಸತ್ವಂ ರಜಸ್ತಥಾ

ಹೇ ಭಾರತ, ರಜಸ್ಸೂ ಮತ್ತು ತಮಸ್ಸೂ ಬಿದ್ದಾಗ ಸತ್ವವು ಮೇಲಕ್ಕೆ ಬರುತ್ತದೆ. ಸತ್ವವೂ ತಮಸ್ಸೂ ಬಿದ್ದಾಗ ರಜಸ್ಸೂ, ಸತ್ಯವೂ ರಜಸ್ಸೂ ಬಿದ್ದಾಗ ತಮಸ್ಸೂ, ಮೇಲಕ್ಕೆ ಬರುತ್ತವೆ. ೧೦

ಸರ್ವದ್ವಾರೇಷು ದೇಹೇಸ್ಮಿನ್ಪ್ರಕಾಶ ಉಪಜಾಯತೇ
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ

ಎಲ್ಲಾ ಇಂದ್ರಿಯಗಳ ಮೂಲಕ ಪ್ರಕಾಶವೂ ಜ್ಞಾನದ ಉದ್ಭವವೂ ಉಂಟಾದಾಗ ಸತ್ವಗುಣದ ವೃದ್ಧಿಯಾಯಿತೆಂದು ತಿಳಿಯಬೇಕು. ೧೧

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ

ಹೇ ಭರತರ್ಷಭ, ರಜೋಮಾರ್ಗಬುದ್ಧಿಯಾದಾಗ ಲೋಭವೂ, ಪ್ರವೃತ್ತಿಯೂ, ಕರ್ಮಗಳ ಆರಂಭವೂ, ಅಶಾಂತಿಯೂ, ಇಚ್ಛೆಯೂ ಉದಿಸುತ್ತವೆ ೧೨

ಅಪ್ರಕಾಶೋಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ

ಹೇ ಕುರುನಂದನ, ತಮೋಗುಣದ ವೃದ್ಧಿಯಾದಾಗ ಅಜ್ಞಾನವೂ ಮಂದತೆಯೂ ಅಸಾವಧಾನವೂ ಮೋಹವೂ ಉತ್ಪನ್ನವಾಗುತ್ತವೆ. ೧೩

ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್
ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ

ತನ್ನಲ್ಲಿ ಸತ್ವಗುಣದ ವೃದ್ಧಿಯಾಗಿರುವ ಸಮಯದಲ್ಲಿ ದೇಹಧಾರಿಯು ಮೃತ್ಯುವನ್ನೈದಿದರೆ ಅದಕ್ಕೆ ಉತ್ತಮಜ್ಞಾನಿಗಳ ನಿರ್ಮಲಲೋಕವು ಲಭಿಸುತ್ತದೆ. ೧೪

ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ

ರಜೋಗುಣದಲ್ಲಿ ಮೃತ್ಯುವೊದಗಿದರೆ ದೇಹಧಾರಿಗೆ ಕರ್ಮಸಂಗಿಗಳ ಲೋಕದಲ್ಲಿ ಜನ್ಮವಾಗುತ್ತದೆ; ಮತ್ತು ತಮೋಗುಣದಲ್ಲಿ ಮೃತ್ಯುವನ್ನೈದುವವನು ಮೂಢಯೋನಿಯಲ್ಲಿ ಹುಟ್ಟುತ್ತಾನೆ. ೧೫

ಟಿಪ್ಪಣಿ—ಕರ್ಮಸಂಗಿಯೆಂದರೆ ಮನುಷ್ಯ ರೂಪವೆಂದರ್ಥ, ಮೂಢ ಯೋನಿಯೆಂದರೆ ಪಶುಗಳೇ ಮೊದಲಾದುವೆಂದು ತಾತ್ಪರ್ಯ.

ಕರ್ಮಣಃ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಂ
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ

ಸತ್ಕರ್ಮದ ಫಲವು ಸಾತ್ವಿಕವಾಗಿಯೂ ನಿರ್ಮಲವಾಗಿಯೂ ಇರುತ್ತದೆ. ರಾಜಸ ಕರ್ಮದ ಫಲವು ದುಃಖ, ತಾಮಸ ಕರ್ಮದ ಫಲವು ಅಜ್ಞಾನ. ೧೬

ಟಿಪ್ಪಣಿ--ನಾವು ಯಾವುದನ್ನು ಸುಖದುಃಖವೆಂದೆಣಿಸುತ್ತೇವೋ ಆ ಸುಖದುಃಖವು ಇಲ್ಲಿ ಉಲ್ಲೇಖಿಸಲ್ಪಟ್ಟಿದೆಯೆಂದು ತಿಳಿಯಕೂಡದು ಸುಖವೆಂದರೆ ಆತ್ಮಾನಂದ, ಆತ್ಮಪ್ರಕಾಶ. ಇದಕ್ಕೆ ವಿರೋಧವಾದುದು ದುಃಖ ೧೭ನೆಯ ಶ್ಲೋಕದಲ್ಲಿ ಇದು ಸ್ಪಷ್ಟವಾಗುತ್ತದೆ.

ಸತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ

ಸತ್ವಗುಣದೊಳಗಿಂದ ಜ್ಞಾನವು ಉತ್ಪನ್ನವಾಗುತ್ತದೆ. ರಜೋಗುಣದೊಳಗಿಂದ ಲೋಭವೂ ತಮೋಗುಣದೊಳಗಿಂದ ಅಸಾವಧಾನ, ಮೋಹ, ಅಜ್ಞಾನ, ಇವುಗಳೂ ಉತ್ಪನ್ನವಾಗುತ್ತವೆ ೧೭

ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ

ಸಾತ್ವಿಕ ಮನುಷ್ಯರು ಮೇಲಕ್ಕೇರುತ್ತಾರೆ. ರಾಜಸರು ಮಧ್ಯದಲ್ಲಿರುತ್ತಾರೆ. ಮತ್ತು ಕಡೆಯ ಗುಣವುಳ್ಳ ತಾಮಸಿಗಳಿಗೆ ಅಧೋಗತಿಯೊದಗುತ್ತದೆ. ೧೮

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ

ಜ್ಞಾನಿಯು ಯಾವಾಗ ಗುಣಗಳನ್ನುಳಿದು ಇನ್ನಾವ ಕರ್ತೃವೂ ಇಲ್ಲವೆಂದು ಕಾಣುತ್ತಾನೊ ಮತ್ತು ಗುಣಗಳನ್ನು ಮೀರಿದ ವಸ್ತು

ವನ್ನರಿಯುತ್ತಾನೋ ಆಗ ಅವನು ನನ್ನ ಭಾವವನ್ನು ಪಡೆಯುತ್ತಾನೆ. ೧೯

ಟಿಪ್ಪಣಿ—ಗುಣಗಳನ್ನು ಕರ್ತೃಗಳೆಂದು ಎಣಿಸುವವರಿಗೆ ಅಹಂಭಾವವುಂಟಾಗಲೇಲಾರದು. ಇದರಿಂದ ಅವರ ಕೆಲಸವೆಲ್ಲಾ ಸ್ವಾಭಾವಿಕವಾಗಿಯೂ ಶರೀರಯಾತ್ರೆಯ ಪೂರ್ತಿಗೂ ನಡೆಯುತ್ತದೆ; ಮತ್ತು ಶರೀರಯಾತ್ರೆಯು ಪರಮಾರ್ಥಕ್ಕಾಗಿಯೇ ನಡೆಯುವ ಕಾರಣ ಅದರ ಕಾರ್ಯಗಳಲ್ಲೆಲ್ಲಾ ನಿರಂತರ ತ್ಯಾಗವೂ ವೈರಾಗ್ಯವೂ ಇರಬೇಕು. ಇಂತಹ ಜ್ಞಾನಿಯು ಸಹಜವಾಗಿಯೇ ಗುಣಗಳನ್ನು ಮೀರಿದ ನಿರ್ಗುಣ ಈಶ್ವರನನ್ನು ಮನನಮಾಡುತ್ತಾನೆ ಮತ್ತು ಭಜಿಸುತ್ತಾನೆ.

ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ

ದೇಹದ ಸಂಗದಿಂದ ಉತ್ಪನ್ನವಾಗುವ ಈ ಮೂರು ಗುಣಗಳನ್ನು ದಾಟಿ ದೇಹಧಾರಿಯು ಹುಟ್ಟು, ನಾವೂ ಮತ್ತು ಮುಪ್ಪು, ಇವುಗಳ ದುಃಖದಿಂದ ಪಾರಾಗಿ ಮೋಕ್ಷವನ್ನು ಪಡೆಯುತ್ತಾನೆ. ೨೦

ಅರ್ಜುನ ಉವಾಚ—

ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ

ಅರ್ಜುನನೆಂದನು—

ಎಲೈ ಪ್ರಭುವೇ, ಈ ಗುಣಗಳನ್ನು ದಾಟಿರುವವನನ್ನು ಗುರುತಿಸುವ ಲಕ್ಷಣಗಳೇನು? ಅವನ ಆಹಾರಗಳೇನು? ಮತ್ತು ಅವನು ಮೂರು ಗುಣಗಳನ್ನೂ ಯಾವ ರೀತಿಯಿಂದ ದಾಟುತ್ತಾನೆ? ೨೧

ಶ್ರೀ ಭಗವಾನುವಾಚ—

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ
ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ
ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ

ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ
ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ

ಶ್ರೀ ಭಗವಂತನು ಹೇಳಿದನು—

ಎಲೈ ಪಾಂಡವನೆ, ಪ್ರಕಾಶ, ಪ್ರವೃತ್ತಿ, ಮತ್ತು ಮೋಹ, ಇವು ಪ್ರಾಪ್ತವಾದಾಗ ಯಾರು ಅವನ್ನು ದುಃಖವೆಂದೆಣಿಸುವದಿಲ್ಲವೊ ಮತ್ತು ಅವುಗಳು ಪ್ರಾಪ್ತವಾಗದಿದ್ದರೆ ಅವುಗಳಿಗೆ ಇಚ್ಛಿಸುವದಿಲ್ಲವೊ, ಉದಾಸೀನನಂತೆ ಯಾರು ಸ್ಥಿರನೊ, ಯಾರನ್ನು ಗುಣಗಳು ಅಲ್ಲಾಡಿಸುವದಿಲ್ಲವೊ, ಗುಣಗಳೇ ತಮ್ಮ ಕೆಲಸವನ್ನು ಮಾಡಿಕೊಂಡಿವೆಯೆಂದು ಯಾರು ಸ್ಥಿರನಾಗಿದ್ದು ವಿಚಲಿತನಾಗದೆ ಇರುವನೊ, ಯಾರು ಸುಖದಲ್ಲಿಯೂ ದುಃಖದಲ್ಲಿಯೂ ಸಮತೆಯುಳ್ಳವನಾಗಿರುವನೋ, ಸ್ವಸ್ಥನಾಗಿರುವನೊ, ಮಣ್ಣಿನಹೆಂಟೆಯನ್ನೂ ಕಲ್ಲನ್ನೂ ಚಿನ್ನವನ್ನೂ ಸಮಸಮವಾಗಿ ಕಾಣುವನೊ, ಪ್ರಿಯ ಅಥವಾ ಅಪ್ರಿಯ ವಸ್ತುವನ್ನು ಪಡೆದರೆ ಒಂದೇ ರೀತಿ ಇರುವನೊ, ಯಾರು ತನ್ನ ನಿಂದೆ ಅಥವಾ ಸ್ತುತಿಯನ್ನು ಒಂದೇ ಸಮನಾಗಿ ಕಾಣವಂತಹ ಧೀಮಂತನೊ, ಯಾರಿಗೆ ಮಾನ-ಅಪಮಾನಗಳು ಸಮಾನವೊ, ಯಾರು ಮಿತ್ರಪಕ್ಷ-ಶತ್ರುಪಕ್ಷಗಳಲ್ಲಿ ಸಮಾನ ಭಾವವಿಡುತ್ತಾನೊ ಮತ್ತು ಯಾರು ಸಕಲ ಆರಂಭ [ಪ್ರಯತ್ನ] ಗಳನ್ನೂ ಬಿಟ್ಟುಬಿಟ್ಟಿರುವನೊ, ಅವನು ಗುಣಾತೀತನೆನಿಸಿಕೊಳ್ಳುತ್ತಾನೆ

೨೨-೨೫

**ಟಿಪ್ಪಣಿ**—೨೨ರಿಂದ ೨೫ರವರೆಗಿನ ಶ್ಲೋಕಗಳು ಒಮ್ಮೆಯೇ ವಿಚಾರ ಮಾಡತಕ್ಕವಾಗಿವೆ. ಪ್ರಕಾಶ, ಪ್ರವೃತ್ತಿ ಮತ್ತು ಮೋಹ, ಇವು ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಕ್ರಮಶಃ ಸತ್ವ, ರಜಸ್ಸು ಮತ್ತು ತಮಸ್ಸಿನ ಪರಿಣಾಮಗಳು ಅಥವಾ ಚಿಹ್ನೆಗಳಾಗಿವೆ. ಅರ್ಥಾತ್ ಗುಣಗಳನ್ನು ದಾಟಿದವನ ಮೇಲೆ ಆ ಪರಿಣಾಮದಿಂದ ಯಾವ ಪ್ರಭಾವವೂ ಉಂಟಾಗುವದಿಲ್ಲ ಎಂಬುದು ಇಲ್ಲಿ ಹೀಗೆ ಹೇಳುವದರ ತಾತ್ಪರ್ಯ. ಕಲ್ಲು ಬೆಳಗಲಿಚ್ಛಿಸುವದಿಲ್ಲ, ಪ್ರವೃತ್ತಿಯನ್ನಾಗಲಿ

ಜಡತೆಯನ್ನಾಗಲಿ ದ್ವೇಷಿಸುವದಿಲ್ಲ. ಅದಕ್ಕೆ ಇಚ್ಛೆಯಿಲ್ಲದೆಯೇ ಶಾಂತಿಯುಂಟು. ಅದಕ್ಕೆ ಯಾರಾದರೂ ಚಲನೆಯನ್ನು ಕೊಟ್ಟರೆ ಅದು ಅವನನ್ನು ದ್ವೇಷಿಸುವದಿಲ್ಲ. ಚಲನೆಯನ್ನು ಕೊಟ್ಟಮೇಲೆ ಅದನ್ನು ಸ್ಥಿರಗೊಳಿಸಿಡುತ್ತಾನೆ, ಇದರಿಂದ, ಪ್ರವೃತ್ತಿಯಿಂದ—ಚಲನೆಯು ನಿಂತುಹೋಯಿತು, ಮೋಹವು, ಜಡತೆಯು, ಪ್ರಾಪ್ತವಾಯಿತು ಎಂಬ ವಿಚಾರದಿಂದ—ಅದು ದುಃಖಿಯಾಗುವುದಿಲ್ಲ ; ಮೂರು ಸ್ಥಿತಿಗಳಲ್ಲಿಯೂ ಅದು ಒಂದೇ ಸಮನಾಗಿ ವರ್ತಿಸುತ್ತದೆ. ಕಲ್ಲಿಗೂ ಗುಣಾತೀತನಿಗೂ ಇರುವ ಅಂತರವೇನೆಂದರೆ ಗುಣಾತೀತನು ಚೇತನವುಳ್ಳವನು ; ಅವನು ಜ್ಞಾನಪೂರ್ವಕವಾಗಿ ಗುಣಗಳ ಪರಿಣಾಮಗಳನ್ನು, ಸ್ಪರ್ಶವನ್ನು, ತ್ಯಜಿಸಿ, ಜಡವಾದ ಕಲ್ಲಿನಂತೆ ಆಗಿಬಿಟ್ಟಿರುತ್ತಾನೆ. ಕಲ್ಲು ಗುಣಗಳ, ಎಂದರೆ ಪ್ರಕೃತಿಯ, ಕಾರ್ಯಗಳ, ಸಾಕ್ಷಿಯೇ ಹೊರತು ಕರ್ತೃವಲ್ಲ; ಹಾಗೆಯೇ ಜ್ಞಾನಿಯೂ ಅದರ ಸಾಕ್ಷಿಯಾಗಿರುತ್ತಾನೆ, ಕರ್ತನಾಗುವದಿಲ್ಲ. ಇಂತಹ ಜ್ಞಾನಿಯ ಸಂಬಂಧವಾಗಿ ೨೩ನೆಯ ಶ್ಲೋಕದಲ್ಲಿ ಹೇಳಿರುವಂತೆ; ಅವನು 'ಗುಣಗಳು ತಮ್ಮ ಕೆಲಸವನ್ನು ಮಾಡುತ್ತಿರುತ್ತವೆ' ಎಂದೆಣಿಸಿ, ವಿಚಲಿತನಾಗದೆ ಸ್ಥಿರನಾಗಿರುತ್ತಾನೆ, ಉದಾಸೀನನಂತೆ ಇರುತ್ತಾನೆ, ಅಲುಗಾಡದೆ ಇರುತ್ತಾನೆ, ಎಂಬದಾಗಿ ಕಲ್ಪನೆ ಮಾಡಬಹುದು. ಇಂತಹ ಸ್ಥಿತಿಯನ್ನು ಗುಣಗಳಲ್ಲಿ ತನ್ಮಯರಾದ ನಾವುಗಳು ಧೈರ್ಯಪೂರ್ವಕವಾಗಿ ಕೇವಲ ಕಲ್ಪನೆಯಿಂದ ತಿಳಿದುಕೊಳ್ಳಬಲ್ಲೆವೇ ಹೊರತು, ಅದರ ಅನುಭವ ಹೊಂದಲಾರೆವು. ಆದರೆ ಆ ಕಲ್ಪನೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನಾವು 'ನಾನು' ಎಂಬ ಅಂಶವನ್ನು ದಿನ ದಿನವೂ ತಗ್ಗಿಸುತ್ತ ಹೋದರೆ ಕಡೆಯಲ್ಲಿ ಗುಣಾತೀತನ ಅವಸ್ಥೆಯನ್ನು ಸಮೀಪಿಸಿ ಅದರ ಕ್ಷಣಿಕ ದರ್ಶನವನ್ನಾದರೂ ಪಡೆಯಬಲ್ಲೆವು. ಗುಣಾತೀತನು ತನ್ನ ಸ್ಥಿತಿಯನ್ನು ಅನುಭವಿಸುವನೇ ಹೊರತು ಅದನ್ನು ಬಣ್ಣಿಸಲಾರನು, ಬಣ್ಣಿಸಬಲ್ಲವನಾದರೆ ಅವನು ಗುಣಾತೀತನಲ್ಲ ; ಏಕೆಂದರೆ ಅವನಲ್ಲಿ ಅಹಂಭಾವವುಂಟು. ಎಲ್ಲರೂ ಸಹಜವಾಗಿ ಅನುಭವಿಸಬಲ್ಲ ಶಾಂತಿಯು, ಪ್ರಕಾಶವು, ಧಾಂಧಲೆಯು—ಎಂದರೆ ಪ್ರವೃತ್ತಿ ಮತ್ತು ಜಡತೆ, ಇವುಗಳು—ಮೋಹರೂಪವಾದವು. ಸಾತ್ತ್ವಿಕತೆಯು ಗುಣಾತೀತನ ಅತ್ಯಂತ ಸಮೀಪವಾದ ಸ್ಥಿತಿಯೆಂದು ಗೀತೆಯಲ್ಲಿ ಸ್ಥಾನಸ್ಥಾನದಲ್ಲಿಯೂ ಸ್ಪಷ್ಟಗೊಳಿಸಲ್ಪಟ್ಟಿದೆ. ಆದುದರಿಂದ ಮನುಷ್ಯನ ಪ್ರಯತ್ನವು ಸತ್ವಗುಣದ ವಿಕಾಸಕ್ಕಾಗಿ [ನಡೆಯಬೇಕು]. ಅದರಿಂದ ಗುಣಾತೀತನ ಸ್ಥಿತಿಯು ಪ್ರಾಪ್ತವಾಗಿಯೇ ಆಗುವದೆಂಬ ಭರವಸೆಯನ್ನಿಟ್ಟುಕೊಳ್ಳಬೇಕು.

ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ
ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ

ಏಕನಿಷ್ಠನಾಗಿ ಭಕ್ತಿಯೋಗದ ಮೂಲಕ ನನ್ನ ಸೇವೆಯನ್ನು ಮಾಡುವವನು ಈ ಗುಣಗಳನ್ನು ದಾಟಿ ಬ್ರಹ್ಮರೂಪನಾಗಲು ಯೋಗ್ಯನಾಗುತ್ತಾನೆ. ೨೬

ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ

ಮತ್ತು ಬ್ರಹ್ಮದ ಸ್ಥಿತಿಯು ನಾನೇ, ಶಾಶ್ವತ ಮೋಕ್ಷದ ಸ್ಥಿತಿಯು ನಾನು. ಹಾಗೆಯೇ ಸನಾತನ ಧರ್ಮದ ಮತ್ತು ಉತ್ತಮ ಸುಖದ ಸ್ಥಿತಿಯೂ ನಾನೇ. ೨೭

ಓಂ ತತ್ಸತ್

ಈ ಪ್ರಕಾರ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಗುಣತ್ರಯ ವಿಭಾಗಯೋಗವೆಂಬ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



# ೧೫

# ಪುರುಷೋತ್ತಮಯೋಗ



ಈ ಅಧ್ಯಾಯದಲ್ಲಿ ಕ್ಷರ ಮತ್ತು ಅಕ್ಷರವನ್ನು ಮೀರಿದಂತಹ ತನ್ನ ಉತ್ತಮ ಸ್ವರೂಪವನ್ನು ಭಗವಂತನು ತಿಳಿಯ ಹೇಳಿದ್ದಾನೆ.

ಶ್ರೀ ಭಗವಾನುವಾಚ—

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್

ಶ್ರೀ ಭಗವಂತನು ಹೇಳಿದನು—

ಯಾವದರ ಬೇರುಗಳು ಮೇಲಿವೆಯೋ, ಯಾವದರ ಶಾಖೆಗಳು ಕೆಳಗಿವೆಯೋ, ಮತ್ತು ವೇದಗಳು ಯಾವದರ ಎಲೆಗಳಾಗಿವೆಯೋ, ಅಂತಹ ಅವಿನಾಶಿಯಾದ ಅಶ್ವತ್ಥ ವೃಕ್ಷವನ್ನು ಧೀಮಂತರು ವರ್ಣಿಸಿದ್ದಾರೆ. ಇದನ್ನರಿತವರು ವೇದವನ್ನರಿತ ಜ್ಞಾನಿಗಳಾಗಿದ್ದಾರೆ. ೧

ಟಿಪ್ಪಣಿ—'ಶ್ವಃ' ಎಂದರೆ ಮುಂದೆ ಬರುವ ನಾಳೆ ಎಂಬರ್ಥ. ಇದರಿಂದ ಅಶ್ವತ್ಥ ಎಂದರೆ ನಾಳೆಯ ದಿನದವರೆಗೆ ನಿಲ್ಲದ ಕ್ಷಣಿಕ ಪ್ರಪಂಚವೆಂದರ್ಥ. ಪ್ರತಿ ಕ್ಷಣವೂ ಪ್ರಪಂಚವು ರೂಪಾಂತರವನ್ನೈದುತ್ತಿರುವದರಿಂದ ಅದು ಅಶ್ವತ್ಥವು. ಪರಂತು ಇಂತಹ ಸ್ಥಿತಿಯಲ್ಲಿ ಅದು ಸದಾ ಇರತಕ್ಕದು ಮತ್ತು ಅದರ ಬೇರುಗಳು ಊರ್ಧ್ವವಾಗಿವೆ ಎಂದರೆ [ಅವುಗಳೇ] ಈಶ್ವರ. ಆದುದರಿಂದ ಅದು ಅವಿನಾಶಿಯು. ಅದರಲ್ಲಿ ವೇದಗಳೆಂಬ, ಎಂದರೆ ಧರ್ಮದ ಶುದ್ಧ ಜ್ಞಾನರೂಪವಾದ, ಎಲೆಗಳಿಲ್ಲದಿದ್ದರೆ ಅದು ಶೋಭಿಸಲಾರದು. ಹೀಗೆ ಯಾರಿಗೆ

ಪ್ರಪಂಚದ ಯಥಾರ್ಥ ಜ್ಞಾನವಿದೆಯೊ ಮತ್ತು ಯಾರು ವೇದವನ್ನರಿತಿರುವನೊ ಅವನು ಜ್ಞಾನಿಯು.

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ ಗುಣಪ್ರವೃದ್ಧಾ
ವಿಷಯಪ್ರವಾಲಾಃ
ಅಧಶ್ಚ ಮೂಲಾನ್ಯನುಸಂತತಾನಿ ಕರ್ಮಾನುಬಂಧೀನಿ ಮನುಷ್ಯಲೋಕೇ

ಗುಣಗಳ ಸ್ಪರ್ಶದ ಮೂಲಕ ಹೆಚ್ಚಿರುವ ಮತ್ತು ವಿಷಯಗಳೆಂಬ ಚಿಗುರುಗಳುಳ್ಳ ಆ ಅಶ್ವತ್ಥದ ರೆಂಬೆಗಳು ಮೇಲೂ ಕೆಳಗೂ ಹರಡಿವೆ; ಮತ್ತು ಕರ್ಮಗಳ ಬಂಧನವನ್ನುಂಟುಮಾಡುವ ಅದರ ಬೇರುಗಳು ಮನುಷ್ಯಲೋಕದಲ್ಲಿ ಕೆಳಗೆ ಪಸರಿಸಿವೆ. ೨

ಟಿಪ್ಪಣಿ —ಇದು ಅಜ್ಞಾನಿಯ ದೃಷ್ಟಿಯಿದ ಪ್ರಪಂಚದ ವರ್ಣನೆ. ಅವನು ಮೇಲ್ಗಡೆ ಈಶ್ವರನಲ್ಲಿರುವ ಬೇರನ್ನು ಅವನು ನೋಡುವದಿಲ್ಲ; ವಿಷಯಗಳ ರಮ್ಯತೆಯಲ್ಲಿ ಮುಗ್ಧನಾಗಿದ್ದು ತ್ರಿಗುಣಗಳ ಮೂಲಕ ಈ ವೃಕ್ಷವನ್ನು ಪೋಷಿಸುತ್ತಾನೆ ಮತ್ತು ಮನುಷ್ಯಲೋಕದಲ್ಲಿ ಕರ್ಮಪಾಶಬದ್ಧನಾಗಿರುತ್ತಾನೆ.

ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ
ಸಂಪ್ರತಿಷ್ಠಾ
ಅಶ್ವತ್ಥಮೇನಂ ಸುವಿರೂಢಮೂಲಮಸಂಗಶಸ್ತ್ರೇಣ ದೃಢೇನ ಛಿತ್ವಾ
ತತಃ ಪದಂ ತತ್ಪರಿಮಾರ್ಗಿತವ್ಯಂ ಯಸ್ಮಿನ್ಗತಾ ನ ನಿವರ್ತಂತಿ ಭೂಯಃ
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ
ಪುರಾಣೀ

ಅದರ ಯಥಾರ್ಥ ಸ್ವರೂಪವು ಕಣ್ಣಿಗೆ ಕಾಣುವದಿಲ್ಲ. ಅದಕ್ಕೆ ಅಂತವಿಲ್ಲ, ಆದಿಯಿಲ್ಲ, ಆಧಾರವಿಲ್ಲ. ಬಹು ಆಳವಾಗಿ ಹೋಗಿರುವ ಬೇರುಗಳುಳ್ಳ ಈ ಅಶ್ವತ್ಥ ವೃಕ್ಷವನ್ನು ಅಸಂಗವೆಂಬ ಪ್ರಬಲ ಶಸ್ತ್ರದಿಂದ ಕಡಿದು ಮನುಷ್ಯನು 'ಯಾರು ಸನಾತನ ಪ್ರವೃತ್ತಿಯನ್ನು—ಮಾಯೆಯನ್ನು—ಹರಡಿದ್ದಾನೊ ಆ ಪುರುಷನನ್ನು ಶರಣು ಹೊಗುವೆನು' ಎಂದು ಪ್ರಾರ್ಥಿಸಬೇಕು. ಮತ್ತು ಯಾವ ಪದವನ್ನು ಪಡೆಯುವವನು ಪುನಃ ಜನ್ಮಮರಣ ಚಕ್ರದಲ್ಲಿ ಬೀಳಬೇಕಾಗುವದಿಲ್ಲವೊ ಆ ಪದವನ್ನರಸಬೇಕು. ೩,೪

ಟಿಪ್ಪಣಿ — ಅಸಂಗವೆಂದರೆ ಅಸಹಯೋಗ, ವೈರಾಗ್ಯ ಎಲ್ಲಿಯವರೆಗೆ ಮನುಷ್ಯನು ವಿಷಯಗಳೊಡನೆ ಅಸಹಯೋಗ ಮಾಡುವದಿಲ್ಲವೋ, ಅವುಗಳ ಪ್ರಲೋಭನಗಳಿಂದ ದೂರನಾಗಿರುವದಿಲ್ಲವೋ, ಅಲ್ಲಿಯವರೆಗೆ ಅವನು ಅವುಗಳಲ್ಲಿ ಸಿಕ್ಕಿಬೀಳುತ್ತಲೇ ಇರುವನು. ವಿಷಯಗಳೊಡನೆ ಆಟವಾಡುತ್ತಲೂ ಅವುಗಳ ಸ್ಪರ್ಶವಿಲ್ಲದೆಯೂ ಇರುವದು ಅಸಾಧ್ಯವಾದ ವಿಷಯವೆಂಬುದು ಈ ಶ್ಲೋಕದ ತಾತ್ಪರ್ಯ.

ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃ
ಪದಮವ್ಯಯಂ ತತ್

ಯಾರು ಮಾನಮೋಹಗಳನ್ನು ತ್ಯಜಿಸಿರುವನೋ, ಯಾರು ಆಸಕ್ತಿಯಿಂದುತ್ಪನ್ನವಾಗುವ ದೋಷಗಳನ್ನು ದೂರಮಾಡಿರುವನೋ, ಯಾರು ಆತ್ಮದಲ್ಲಿ ಸದಾ ನಿಮಗ್ನನಾಗಿರುವನೋ, ಯಾರ ವಿಷಯಗಳು ಶಾಂತವಾಗಿರುವವೋ, ಯಾರು ಸುಖದುಃಖಗಳೆಂಬ ದ್ವಂದ್ವಗಳಿಂದ ಬಿಡುಗಡೆ ಹೊಂದಿರುವನೋ, ಆ ಜ್ಞಾನಿಯು ಅವಿನಾಶಿಯಾದ ಸ್ಥಾನವನ್ನು ಪಡೆಯುತ್ತಾನೆ ೫

ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ

ಅಲ್ಲಿ ಸೂರ್ಯ, ಚಂದ್ರ, ಅಗ್ನಿ, ಇವರು ಪ್ರಕಾಶಿಸುವದಿಲ್ಲ. ಎಲ್ಲಿಗೆ ಹೋದವರು ಪುನಃ ಹುಟ್ಟಬೇಕಾಗುವದಿಲ್ಲವೋ ಅದು ನನ್ನ ಪರಮಧಾಮವು. ೬

ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ
ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ

ನನ್ನ ಸನಾತನ ಅಂಶವೇ ಜೀವಲೋಕದಲ್ಲಿ ಜೀವವಾಗಿ ಪ್ರಕೃತಿಯಲ್ಲಿರುವ ಐದು ಇಂದ್ರಿಯಗಳನ್ನೂ ಮನಸ್ಸನ್ನೂ ಆಕರ್ಷಿಸುತ್ತದೆ. ೭

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್

(ಜೀವರೂಪವಾಗಿರುವ ಈ ನನ್ನ ಅಂಶವಾದ) ಈಶ್ವರನು ಶರೀರಧಾರಣೆಮಾಡುವಾಗ ಅಥವಾ ಶರೀರವನ್ನು ಬಿಡುವಾಗ, ಗಾಳಿಯು ಸುತ್ತಮುತ್ತಲಿನ ಮಂಡಲದೊಳಗಿಂದ ಗಂಧವನ್ನು ಸೆಳೆದೊಯ್ಯುವಂತೆಯೇ, ಮನದೊಡನೆ ಇಂದ್ರಿಯಗಳನ್ನು ಜೊತೆಗೆ ಕೊಂಡೊಯ್ಯುತ್ತಾನೆ. ೮

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ

ಮತ್ತು ಅವನು ಕಿವಿ, ಕಣ್ಣು, ಚರ್ಮ, ನಾಲಗೆ, ಮೂಗು ಮತ್ತು ಮನಸ್ಸು, ಇವುಗಳ ಆಶ್ರಯವನ್ನು ಹೊಂದಿ ವಿಷಯಗಳ ಸೇವನೆಯನ್ನು ಮಾಡುತ್ತಾನೆ. ೯

ಟಿಪ್ಪಣಿ—ಇಲ್ಲಿ ವಿಷಯ ಶಬ್ದದ ಅರ್ಥವು ಬೀಭತ್ಸ ವಿಲಾಸವಲ್ಲ; ಪರಂತು ಆಯಾ ಇಂದ್ರಿಯಗಳ ಸ್ವಾಭಾವಿಕ ಕ್ರಿಯೆಯೆಂದು ಅದರ ತಾತ್ಪರ್ಯ; ಹೇಗೆಂದರೆ ಕಣ್ಣಿನ ವಿಷಯವು ನೋಡುವದು, ಕಿವಿಯದು ಕೇಳುವದು, ನಾಲಗೆಯದು ರುಚಿನೋಡುವದು. ಈ ಕ್ರಿಯೆಗಳು ವಿಕಾರಯುಕ್ತಗಳಾದರೆ—ಅಹಂಭಾವದಿಂದೊಡಗೂಡಿದರೆ—ಅವು ಬೀಭತ್ಸವಾಗುತ್ತವೆ. ನಿರ್ವಿಕಾರಗಳಾಗಿದ್ದಾಗ ಅವು ನಿರ್ದೋಷವಾಗಿರುತ್ತವೆ. ಮಗುವು ಕಣ್ಣಿನಿಂದನೋಡುವಾಗ ಅಥವಾ ಕೈಯಿಂದ ಮುಟ್ಟುವಾಗ ವಿಕಾರವನ್ನು ಹೊಂದುವದಿಲ್ಲ. ಇದರಿಂದ ಕೆಳಗಿನ ಶ್ಲೋಕದಲ್ಲಿ [ಈ ರೀತಿಯಾಗಿ] ಹೇಳುತ್ತಾರೆ:—

ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ

(ಶರೀರವನ್ನು) ತ್ಯಾಗಮಾಡುವ ಅಥವಾ ಅದರಲ್ಲಿ ವಾಸಿಸುವ, ಅಥವಾ ಗುಣಗಳನ್ನು ಆಶ್ರಯಿಸಿ ಭೋಗಗಳನ್ನು ಭೋಗಿಸುವ (ಈ ಅಂಶರೂಪಿಯಾದ ಈಶ್ವರ)ನನ್ನು ಮೂರ್ಖರು ನೋಡುವದಿಲ್ಲ, ಆದರೆ ದಿವ್ಯಚಕ್ಷುಗಳಾದ ಜ್ಞಾನಿಗಳು ನೋಡುತ್ತಾರೆ. ೧೦

ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ

ಯತ್ನಗೈವ ಯೋಗಿಗಳು ತನ್ನಲ್ಲಿ ತಾನಿರುವ (ಈ ಈಶ್ವರ) ನನ್ನು ನೋಡುತ್ತಾರೆ. ಆತ್ಮ ಶುದ್ಧಿ ಮಾಡಿಕೊಂಡಿಲ್ಲದ ಮೂಢರು ಯತ್ನಮಾಡುತ್ತಿದ್ದರೂ ಇವನನ್ನರಿಯುವದಿಲ್ಲ. ೧೧

ಟಿಪ್ಪಣಿ — ಇದರಲ್ಲಿಯೂ ಒಂಬತ್ತನೆಯ ಅಧ್ಯಾಯದಲ್ಲಿಯೂ ದುರಾಚಾರಿಗಳಿಗೆ ಭಗವಂತನು ಕೊಟ್ಟಿರುವ ವಚನಗಳಲ್ಲಿ [ಪರಸ್ಪರ] ವಿರೋಧವಿಲ್ಲ. ಅಕೃತಾತ್ಮನೆಂದರೆ ಭಕ್ತಿಹೀನನು, ಸ್ವೇಚ್ಛಾಚಾರಿಯು, ದುರಾಚಾರಿಯು. ನಮ್ರತಾಪೂರ್ವಕವಾಗಿ ಶ್ರದ್ಧೆಯಿಂದ ಈಶ್ವರನನ್ನು ಭಜಿಸುವವನು ಆತ್ಮಶುದ್ಧನಾಗುತ್ತಾನೆ ಮತ್ತು ಈಶ್ವರನನ್ನರಿಯುತ್ತಾನೆ. ಯಮನಿಯಮಾದಿಗಳನ್ನು ಲಕ್ಷಿಸದೆ ಕೇವಲ ಬುದ್ಧಿಪ್ರಯೋಗದಿಂದ ಈಶ್ವರನನ್ನರಿಯಲು ಬಯಸುವ ಅಚೇತಸರು—ಚಿತ್ತಶೂನ್ಯರು, ರಾಮಶೂನ್ಯರು—ರಾಮನನ್ನರಿಯುವದಿಲ್ಲ.

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ

ಸೂರ್ಯನಲ್ಲಿರುವ ಯಾವ ತೇಜಸ್ಸು ಇಡೀ ಜಗತ್ತನ್ನು ಬೆಳಗುವುದೊ ಮತ್ತು ಯಾವ ತೇಜಸ್ಸು ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಇದೆಯೊ ಅದು ನನ್ನದೆಂದು ತಿಳಿ. ೧೨

ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ

ಭೂಮಿಯನ್ನು ಪ್ರವೇಶಿಸಿ ನಾನು ನನ್ನ ಶಕ್ತಿಯಿಂದ ಪ್ರಾಣಿಗಳ ಆಧಾರನಾಗಿರುತ್ತೇನೆ, ಮತ್ತು ರಸವನ್ನು ಹುಟ್ಟಿಸುವ ಚಂದ್ರನಾಗಿ ಎಲ್ಲಾ ವನಸ್ಪತಿಗಳ ಪೋಷಣೆಯನ್ನೂ ಮಾಡುತ್ತೇನೆ. ೧೩

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ

ಪ್ರಾಣಿಗಳ ಶರೀರವನ್ನಾಶ್ರಯಿಸಿ ಜಠರಾಗ್ನಿಯಾಗಿ ಪ್ರಾಣ ಮತ್ತು ಅಪಾನ ವಾಯುಗಳ ಮೂಲಕ ನಾನು ನಾಲ್ಕು ವಿಧದ ಅನ್ನವನ್ನು ಅರಗಿಸುತ್ತೇನೆ. ೧೪

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ
ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಮ್

ಎಲ್ಲದರ ಹೃದಯಗಳಲ್ಲಿಯೂ ಇರುವ ನನ್ನ ಮೂಲಕ, ಸ್ಮೃತಿ, ಜ್ಞಾನ ಮತ್ತು ಅದರ ಅಭಾವ ಉಂಟಾಗುತ್ತದೆ. ಸಮಸ್ತ ವೇದಗಳ ಮೂಲಕ ಅರಿಯಲು ಯೋಗ್ಯನು ನಾನೇ, ವೇದಗಳನ್ನರಿಯುವವನು ನಾನು, ವೇದಾಂತವನ್ನು ಪ್ರಕಟಿಸುವವನೂ ನಾನೇ. ೧೫

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ

ಈ ಲೋಕದಲ್ಲಿ ಕ್ಷರ, ಎಂದರೆ ನಾಶವಂತ, ಮತ್ತು ಅಕ್ಷರ, ಎಂದರೆ, ಅವಿನಾಶಿಯಾದ ಇಬ್ಬರು ಪುರುಷರುಂಟು. ಇರುವ ಭೂತಗಳಿಗೆಲ್ಲಾ ಕ್ಷರ [ಪುರುಷ] ನೆಂದೂ ಮತ್ತು ಅವುಗಳಲ್ಲಿ ಸ್ಥಿರನಾಗಿರುವ ಅಂತರ್ಯಾಮಿಗೆ ಅಕ್ಷರ [ಪುರುಷ] ನೆಂದೂ ಕರೆಯುತ್ತಾರೆ. ೧೬

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ

ಇದಾದವೇಲೆ ಉತ್ತಮನು ಪುರುಷನು ಬೇರೆ ಇದ್ದಾನೆ. ಅವನು ಪರಮಾತ್ಮನೆನಿಸಿಕೊಳ್ಳುತ್ತಾನೆ. ಈ ಅವ್ಯಯನಾದ ಈಶ್ವರನು ಮೂರು ಲೋಕಗಳನ್ನೂ ಪ್ರವೇಶಿಸಿ ಅವುಗಳ ಪೋಷಣೆಯನ್ನು ಮಾಡುತ್ತಾನೆ ೧೭

ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ

ಏಕೆಂದರೆ ನಾನು ಕ್ಷರ [ಪುರುಷ] ನನ್ನು ದಾಟಿಯೂ ಅಕ್ಷರ [ಪುರುಷ] ನಿಗಿಂತಲೂ ಉತ್ತಮನಾಗಿಯೂ ಇದ್ದೇನೆ. ಇದರಿಂದ

[ನಾನು] ವೇದಗಳಲ್ಲಿಯೂ ಲೋಕಗಳಲ್ಲಿಯೂ ಪುರುಷೋತ್ತಮ ನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದೇನೆ. ೧೮

ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ

ಹೇ ಭಾರತ, ಮೋಹರಹಿತನಾಗಿ ನನ್ನನ್ನು ಪುರುಷೋತ್ತಮ ನೆಂದು ಈ ಪ್ರಕಾರವಾಗಿ ಅರಿಯುವವನು ಎಲ್ಲವನ್ನೂ ಅರಿಯು ತ್ತಾನೆ ಮತ್ತು ನನ್ನನ್ನು ಪೂರ್ಣಭಾವದಿಂದ ಭಜಿಸುತ್ತಾನೆ. ೧೯

ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ
ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ

ಹೇ ಅನಘ [ಪಾಪವಿಲ್ಲದವನೆ], ಈ ಅತ್ಯಂತ ಗೂಢ ಶಾಸ್ತ್ರ ವನ್ನು ನಾನು ನಿನಗೆ ಹೇಳಿದೆನು. ಹೇ ಭಾರತ, ಇದನ್ನರಿತು ಮನು ಷ್ಯನು ಬುದ್ಧಿವಂತನಾಗಿ ತನ್ನ ಜೀವನವನ್ನು ಸಾರ್ಥಕಗೊಳಿಸಲಿ. ೨೦

ಓಂ ತತ್ಸತ್

ಈ ಪ್ರಕಾರ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮ ವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಪುರುಷೋತ್ತಮ ಯೋಗವೆಂಬ ಹದಿನೈದನಯ ಅಧ್ಯಾಯವು ಸಮಾಪ್ತವಾದುದು.



# ೧೬

# ದೈವಾಸುರಸಂಪದ್ವಿಭಾಗಯೋಗ



ಈ ಅಧ್ಯಾಯದಲ್ಲಿ ದೈವೀ ಮತ್ತು ಆಸುರೀ ಸಂಪತ್ತಿನ ವರ್ಣನೆಯಿದೆ.

ಶ್ರೀ ಭಗವಾನುವಾಚ—

ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ

ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ

ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ

ಶ್ರೀ ಭಗವಂತನೆಂದನು—

ಹೇ ಭಾರತ, ಅಭಯ, ಅಂತಃಕರಣದ ಶುದ್ಧಿ, ಜ್ಞಾನ ಮತ್ತು ಯೋಗದಲ್ಲಿ ನಿಷ್ಠೆ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಕ್ರೋಧವಿಲ್ಲದೆ ಇರುವದು, ತ್ಯಾಗ, ಶಾಂತಿ, ಅಪೈಶುನ, ಭೂತದಯೆ, ಅಲೋಲುಪ್ತತೆ, ಮೃದುತ್ವ, ಮರ್ಯಾದೆ, ಚಂಚಲತೆಯಿಲ್ಲದಿರುವದು, ತೇಜಸ್ಸು, ಕ್ಷಮೆ, ಧೈರ್ಯ, ಶುಚಿತ್ವ, ಅದ್ರೋಹ, ನಿರಭಿಮಾನ—ಇಷ್ಟು ಗುಣಗಳು ದೈವೀ ಸಂಪತ್ತಿಯನ್ನು ಪಡೆದು ಹುಟ್ಟಿದವನಲ್ಲಿರುತ್ತವೆ. ೧-೩

ಟಿಪ್ಪಣಿ—ದಮವೆಂದರೆ ಇಂದ್ರಿಯನಿಗ್ರಹ, ಅಪೈಶುನವೆಂದರೆ ಯಾರ ವಿಷಯದಲ್ಲಿಯೂ ಚಾಡಿ ಹೇಳದಿರುವದು, ಅಲೋಲುಪ್ತ್ವವೆಂದರೆ ಲಾಲಸೆ [ತೀವ್ರವಾದ ಬಯಕೆ] ಯಿಲ್ಲದಿರುವದು—ಲಂಪಟನಾಗಿಲ್ಲದಿರುವದು, ತೇಜಸ್ಸೆಂದರೆ ಪ್ರತಿಯೊಂದು ಪ್ರಕಾರದ ಹೀನವೃತ್ತಿಯನ್ನೂ ವಿರೋಧಿಸಲು ಪ್ರಬಲ ಇಚ್ಛೆ; ಅದ್ರೋಹವೆಂದರೆ ಯಾರಿಗೂ ಕೇಡನ್ನು ಬಯಸದೆ ಅಥವಾ ಮಾಡದೆ ಇರುವದು.

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ

ದಂಭ, ದರ್ಪ, ಅಭಿಮಾನ, ಕ್ರೋಧ, ಪಾರುಷ್ಯ, ಅಜ್ಞಾನ, ಎಲೈ ಪಾರ್ಥನೆ, ಇಷ್ಟು [ಗುಣಗಳು] ಆಸುರೀ ಸಂಪತ್ತನ್ನು ಪಡೆದು ಹುಟ್ಟಿದವನಲ್ಲಿ ಇರುತ್ತವೆ. ४

ಟಿಪ್ಪಣಿ—ತನ್ನಲ್ಲಿಲ್ಲದಿರುವದನ್ನು ತೋರಿಸುವದು ದಂಭ, ಮೋಸ, ದಗಾಕೋರತನ, ದರ್ಪವೆಂದರೆ ದೊಡ್ಡಸ್ತಿಕೆ, ಪಾರುಷ್ಯವೆಂದರೆ ಕಠೋರತೆ.

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ

ದೈವೀ ಸಂಪತ್ತು ಮೋಕ್ಷವನ್ನು ಕೊಡುವಂತಹದು ಮತ್ತು ಆಸುರೀ (ಸಂಪತ್ತು) ಬಂಧನದಲ್ಲಿ ಬೀಳಿಸತಕ್ಕಂತಹದು ಎಂದು ಎಣಿಸಲ್ಪಟ್ಟದೆ. ಎಲೈ ಪಾಂಡವನೆ, ನೀನು ವಿಷಾದಿಸಬೇಡ. ನೀನು ದೈವೀ ಸಂಪತ್ತನ್ನು ಪಡೆದು ಹುಟ್ಟಿರುವೆ. ೫

ದ್ವೌ ಭೂತಸರ್ಗೌ ಲೋಕೇಽಸ್ಮಿನ್ದೈವ ಆಸುರ ಏವ ಚ
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು

ಈ ಲೋಕದಲ್ಲಿ ಎರಡು ಪ್ರಕಾರದ ಸೃಷ್ಟಿಯುಂಟು—ದೈವೀ ಮತ್ತು ಆಸುರೀ. ಹೇ ಪಾರ್ಥ, ದೈವಿಯ ವಿಸ್ತಾರಪೂರ್ವಕ ವರ್ಣನೆಯನ್ನು ಮಾಡಿದುದಾಯಿತು. ಆಸುರಿಯ [ವರ್ಣನೆಯನ್ನು] (ಈಗ) ಕೇಳು. ೬

ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ

ಆಸುರ ಜನರು ಪ್ರವೃತ್ತಿಯೆಂದರೇನು, ನಿವೃತ್ತಿಯೆಂದರೇನು, ಎಂಬುದನ್ನರಿಯರು. ಅದೇ ರೀತಿಯಲ್ಲಿ ಅವರಿಗೆ ಶುಚಿತ್ವ, ಆಚಾರ, ಸತ್ಯ, ಇವುಗಳ ಅರಿವು ಇರುವದಿಲ್ಲ. ೭

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್

'ಜಗತ್ತು ಅಸತ್ಯವಾದುದು, ನಿರಾಧಾರವಾದುದು, ಈಶ್ವರ ರಹಿತವಾದುದು, ಕೇವಲ ಗಂಡುಹೆಣ್ಣಿನ ಸಂಬಂಧದಿಂದ ಉಂಟಾಗಿ ರುವದು. ಅದರಲ್ಲಿ ವಿಷಯಭೋಗವನ್ನುಳಿದು ಇನ್ನಾವ ಹೇತುವಿರ ಬಲ್ಲುದು?' ಎಂದು ಅವರು ಹೇಳುತ್ತಾರೆ. ೮

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ

ಭಯಂಕರವಾದ ಕೆಲಸಗಳನ್ನು ಮಾಡುವ, ಮಂದಮತಿಯುಳ್ಳ, ದುಷ್ಟಜನರು, ಈ ಮತಕ್ಕೆ ಅಂಟಿಕೊಂಡಿರುವ ಲೋಕ ಶತ್ರುಗಳು, ಅದರ ನಾಶಕ್ಕಾಗಿ ಪ್ರವರ್ಧಿಸುತ್ತಾರೆ. ೯

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ
ಮೋಹಾದ್ಗೃಹೀತ್ವಾಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ

ತೃಪ್ತಿಗೊಳ್ಳದಿರತಕ್ಕ ಕಾಮನೆಗಳಿಂದ ತುಂಬಿದವರೂ, ದಂಭವುಳ್ಳವರೂ, [ದುರಭಿ-]ಮಾನವುಳ್ಳವರೂ, ಮದಾಂಧರೂ, ಅಶುಭವಾದ ನಿಶ್ಚಯಗಳನ್ನು ಮಾಡುವವರೂ [ಆದವರು] ಮೋಹದಿಂದ ದುಷ್ಟ ಇಚ್ಛೆಗಳನ್ನು ಹಿಡಿದು ಪ್ರವೃತ್ತರಾಗುತ್ತಾರೆ ೧೦

ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ

ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್

ಪ್ರಳಯ ಪರ್ಯಂತವೂ ಕೊನೆಯನ್ನೇ ಕಾಣದಂತಹ ಅಳತೆಯಿಲ್ಲದ, ಚಿಂತೆಯನ್ನಾಶ್ರಯಿಸಿ, ಕಾಮಗಳ ಪರಮಭೋಗಿಗಳು, ಭೋಗವೇ ಸರ್ವಸ್ವವೆಂದು ನಿಶ್ಚಯಮಾಡುವವರು, ನೂರಾರು ಆಸೆಗಳ ತೊಡಕಿನಲ್ಲಿ ಸಿಕ್ಕಿಬಿದ್ದಿರುವವರು, ಕಾಮಿಗಳು, ಕ್ರೋಧಿಗಳು ವಿಷಯಭೋಗಕ್ಕಾಗಿ ಅನ್ಯಾಯದಿಂದ ಧನಸಂಚಯ ಮಾಡಲಿಚ್ಛಿಸುತ್ತಾರೆ. ೧೧,೧೨

ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ
ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ

ಇಂದು ನಾನು ಇದನ್ನು ಪಡೆದೆನು; ಈ ಮನೋರಥವನ್ನು (ಈಗ) ಪೂರಣಮಾಡುವೆನು; ಇಷ್ಟು ಹಣ ನನ್ನ ಬಳಿ ಇದೆ, ಮತ್ತೆ ನಾಳೆ ಇನ್ನೂ ಇಷ್ಟು ನನ್ನದಾಗುವುದು; ಈ ಶತ್ರುವನ್ನಂತು ಕೊಂದೆನು, ಇನ್ನೊಬ್ಬನನ್ನೂ ಕೊಲ್ಲುವೆನು; ನಾನು ಸರ್ವಸಂಪನ್ನನು, ಭೋಗಿಯು, ಸಿದ್ಧನು, ಬಲಿಷ್ಠನು, ಸುಖಿಯು; ನಾನು ಶ್ರೀಮಂತನು, ಕುಲೀನನು; ನನ್ನ ಸಮಾನರಿನ್ನಾರು? ನಾನು ಯಜ್ಞಮಾಡುವೆನು, ದಾನ ಕೊಡುವೆನು, ಮೋಜುಮಾಡು [ಆನಂದಿಸು-]ವೆನು;— ಹೀಗೆ ಅಜ್ಞಾನದಿಂದ ಮೂಢರಾದ ಜನರು ಭಾವಿಸುತ್ತಾರೆ, ಮತ್ತು ಅನೇಕ ಭ್ರಾಂತಿಗಳಲ್ಲಿ ಬಿದ್ದು, ಮೋಹಜಾಲದಲ್ಲಿ ಸಿಕ್ಕಿ, ವಿಷಯಭೋಗದಲ್ಲಿ ಆಸಕ್ತರಾಗಿ ಅಶುಭ ನರಕಕ್ಕೆ ಬೀಳುತ್ತಾರೆ. ೧೩-೧೬

ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ

ತಮ್ಮನ್ನೇ ದೊಡ್ಡವರನ್ನಾಗಿ ಎಣಿಸುವವರು, ಜಂಭದ ಕೋಳಿಗಳು, ಧನ ಮತ್ತು ಮಾನದ ಹೆಮ್ಮೆಯಲ್ಲಿ ಮುಳುಗಿರುವ (ಈ ಜನರು) ದಂಭದಿಂದ ವಿಧಿಯಿಲ್ಲದೆ, ಕೇವಲ ಹೆಸರಿಗಾಗಿಯೇ, ಯಜ್ಞಮಾಡುತ್ತಾರೆ. ೧೭

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ

ಅಹಂಕಾರ, ಬಲ, ದರ್ಪ, ಕಾಮ ಮತ್ತು ಕ್ರೋಧ, ಇವುಗಳನ್ನಾಶ್ರಯಿಸುವವರು, ನಿಂದೆಗೈವವರು, ಅವರಲ್ಲಿಯೂ ಇತರರಲ್ಲಿಯೂ ವಾಸಿಸುವ ನನ್ನನ್ನು ದ್ವೇಷಿಸುವವರಾಗಿರುತ್ತಾರೆ. ೧೮

ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು

ಈ ನೀಚರಾದ, ದ್ವೇಷವುಳ್ಳ, ಕ್ರೂರರಾದ, ಅಮಂಗಳರಾದ ನರಾಧಮರನ್ನು ನಾನು ಈ ಸಂಸಾರದ ಅತ್ಯಂತ ಆಸುರೀ [ವೃತ್ತಿಯ] ಯೋನಿಗಳಲ್ಲಿಯೇ ಪುನಃ ಪುನಃ ಹಾಕುವೆನು. ೧೯

ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ

ಎಲೈ ಕೌಂತೇಯನೆ, ಜನ್ಮಜನ್ಮದಲ್ಲಿಯೂ ಆಸುರೀ ಯೋನಿಯನ್ನು ಸೇರಿ ನನ್ನನ್ನು ಪಡೆಯದೆ ಈ ಮೂಢರು ಇದಕ್ಕಿಂತಲೂ ಕೀಳಾದ ಗತಿಗಿಳಿಯುತ್ತಾರೆ. ೨೦

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್

ಆತ್ಮವನ್ನು ನಾಶಗೊಳಿಸುವ ನರಕಕ್ಕೆ ಈ ಮೂರು ಬಗೆಯ ಬಾಗಿಲುಂಟು——ಕಾಮ, ಕ್ರೋಧ ಮತ್ತು ಲೋಭ. ಆದುದರಿಂದ ಮನುಷ್ಯನು ಇವು ಮೂರನ್ನೂ ಬಿಡಬೇಕು. ೨೧

ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಂ

ಎಲೈ ಕೌಂತೇಯನೆ, ಈ ತ್ರಿವಿಧ ನರಕದ್ವಾರಕ್ಕೆ ದೂರವಾಗಿರುವ ಮನುಷ್ಯನು ಆತ್ಮದ ಕಲ್ಯಾಣವನ್ನಾಚರಿಸುತ್ತಾನೆ, ಮತ್ತು ಅದರಿಂದ ಪರಮಗತಿಯನ್ನೈದುತ್ತಾನೆ. ೨೨

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ

ಶಾಸ್ತ್ರವಿಧಿಯನ್ನು ಬಿಟ್ಟು ಸ್ವೇಚ್ಛೆಯಿಂದ ಭೋಗಗಳಲ್ಲಿ ಲೀನನಾಗುವ ಮನುಷ್ಯನು ಸಿದ್ಧಿಯನ್ನು ಪಡೆಯುವದಿಲ್ಲ, ಸುಖವನ್ನು ಪಡೆಯುವದಿಲ್ಲ, ಪರಮಗತಿಯನ್ನು ಪಡೆಯುವದಿಲ್ಲ. ೨೩

ಟಿಪ್ಪಣಿ—ಶಾಸ್ತ್ರವಿಧಿಯು ಅರ್ಥವು ಧರ್ಮವೆಂಬ ಹೆಸರಿನಿಂದ ಪ್ರತೀತವಾದ ಗ್ರಂಥಗಳಲ್ಲಿ ನಿರೂಪಿಸಿರುವ ಅನೇಕ ಕ್ರಿಯೆಗಳಲ್ಲ; ಅನುಭವಜ್ಞಾನವನ್ನು ಪಡೆದ ಸತ್ಪುರುಷರು ತೋರಿಸಿಕೊಟ್ಟಿರುವ ಸಂಯಮ ಮಾರ್ಗ.

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ

ಆದುದರಿಂದ ಕಾರ್ಯ ಮತ್ತು ಅಕಾರ್ಯವನ್ನು ನಿರ್ಣಯ ಮಾಡಲಿಕ್ಕೆ ನೀನು ಶಾಸ್ತ್ರವನ್ನು ಪ್ರಮಾಣವೆಂದೆಣಿಸಬೇಕು. ಶಾಸ್ತ್ರವಿಧಿಯೇನೆಂಬುದನ್ನರಿತು ಇಲ್ಲಿ ನೀನು ಕರ್ಮಮಾಡುವದು ಚಿತ. ೨೪

ಟಿಪ್ಪಣಿ— ಶಾಸ್ತ್ರ [ವೆಂಬ ಪದ] ಕ್ಕೆ ಮೇಲೆ ಹೇಳಿರುವ ಅರ್ಥವೇ ಇಲ್ಲಿಯೂ [ಅನ್ವಯಿಸುತ್ತದೆ]. ಎಲ್ಲರೂ ತಮ್ಮ ತಮ್ಮ ನಿಯಮಗಳನ್ನು ಮಾಡಿ

ಕೊಂಡು ಸ್ವೇಚ್ಛಾಚಾರಿಗಳಾಗಕೂಡದು ; ಧರ್ಮದ ಅನುಭವವುಳ್ಳವರ ವಾಕ್ಯವನ್ನು ಪ್ರಮಾಣವೆಂದೆಣಿಸಬೇಕು ; ಎಂಬುದು ಈ ಶ್ಲೋಕದ ಆಶಯ.

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದ ದೈವಾಸುರ ಸಂಪದ್ವಿಭಾಗಯೋಗವೆಂಬ ಹದಿನಾರನೆಯ ಅಧ್ಯಾಯವು ಸಮಾಪ್ತವಾದುದು.



೧೭

# ಶ್ರದ್ಧಾತ್ರಯವಿಭಾಗಯೋಗ



ಶಾಸ್ತ್ರ ಅಥವಾ ಶಿಷ್ಟಾಚಾರವನ್ನು ಪ್ರಮಾಣವೆಂದೆಣಿಸಬೇಕೆಂಬುದನ್ನು ಕೇಳಿ ಅರ್ಜುನನಿಗೆ 'ಶಿಷ್ಟಾಚಾರವನ್ನು ಮನ್ನಣೆ ಮಾಡದಿದ್ದರೂ ಶ್ರದ್ಧೆಯಿಂದ ಆಚರಣೆ ಮಾಡುವವನಿಗೆ ಎಂತಹ ಗತಿಯೊದಗುತ್ತದೆ?' ಎಂಬ ಶಂಕೆಯುಂಟಾಯಿತು. ಇದಕ್ಕೆ ಉತ್ತರವನ್ನು ಕೊಡಲು ಈ ಅಧ್ಯಾಯದಲ್ಲಿ ಯತ್ನಿಸಿದ್ದಾರೆ. ಪರಂತು ಶಿಷ್ಟಾಚಾರವೆಂಬ ದೀಪಸ್ತಂಭವನ್ನು ಬಿಟ್ಟು ಬಿಟ್ಟ ಮೇಲಿನ ಶ್ರದ್ಧೆಯಲ್ಲಿ ಭಯಗಳೊದಗಬಹುದೆಂಬುದನ್ನು ತೋರಿಸಿ ಭಗವಂತನು ತೃಪ್ತಿಗೊಂಡಿದ್ದಾನೆ. ಇದಲ್ಲದೆ ಶ್ರದ್ಧೆ ಮತ್ತು ಇದರ ಆಶ್ರಯದಲ್ಲಿರುವ ಯಜ್ಞ, ತಪಸ್ಸು, ದಾನ ಮುಂತಾದವುಗಳ ಗುಣಾನುಸಾರ ಮೂರು ವಿಭಾಗ ಮಾಡಿ ತೋರಿಸಿದ್ದಾರೆ ಮತ್ತು 'ಓಂ ತತ್ ಸತ್' [ಮಂತ್ರ] ದ ಮಹಿಮೆಯನ್ನು ಹಾಡಿದ್ದಾರೆ.

ಅರ್ಜುನ ಉವಾಚ—

ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ

ಅರ್ಜುನನೆಂದನು:—

ಹೇ ಕೃಷ್ಣ, ಶಾಸ್ತ್ರವಿಧಿಯನ್ನು, ಎಂದರೆ ಶಿಷ್ಟಾಚಾರವನ್ನು, ಲಕ್ಷಿಸದೆ ಕೇವಲ ಶ್ರದ್ಧೆಯಿಂದಲೇ ಪೂಜಾದಿಗಳನ್ನು ಮಾಡುವವರ ಗತಿಯು ಎಂತಹುದು ? ಸಾತ್ವಿಕವೆ, ರಾಜಸವೆ, ಅಥವಾ ತಾಮಸವೆ ? ೧

ಶ್ರೀ ಭಗವಾನುವಾಚ—

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು

ಶ್ರೀ ಭಗವಂತನು ಹೇಳಿದನು—

ಮನುಷ್ಯನಲ್ಲಿ ಸ್ವಭಾವದಿಂದಲೇ ಮೂರು ಬಗೆಯ ಶ್ರದ್ಧೆಯು, ಎಂದರೆ ಸಾತ್ವಿಕ, ರಾಜಸ, ತಾಮಸ ಶ್ರದ್ಧೆಯು ಇರುತ್ತದೆ. ಅದನ್ನು ನೀನು ಕೇಳು.

ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ

ಹೇ ಭಾರತ, ಎಲ್ಲರ ಶ್ರದ್ಧೆಯೂ ಅವರವರ ಸ್ವಭಾವವನ್ನನುಸರಿಸುತ್ತದೆ. ಮನುಷ್ಯನಿಗೆ ಸ್ವಲ್ಪವಾದರೂ ಶ್ರದ್ಧೆಯು ಇದ್ದೇ ಇರುತ್ತದೆ. ಯಾವನ ಶ್ರದ್ಧೆಯು ಹೇಗೋ ಅವನು ಹಾಗೆಯೇ ಇರುತ್ತಾನೆ. ೩

ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ
ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ

ಸಾತ್ವಿಕ ಜನರು ದೇವತೆಗಳನ್ನು ಭಜಿಸುತ್ತಾರೆ, ರಾಜಸರು ಯಕ್ಷರನ್ನೂ ರಾಕ್ಷಸರನ್ನೂ ಭಜಿಸುತ್ತಾರೆ ಮತ್ತು ಇತರ ತಾಮಸ ಜನರು ಭೂತಪ್ರೇತಾದಿಗಳನ್ನು ಭಜಿಸುತ್ತಾರೆ. ೪

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ
ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ
ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್

ದಂಭ ಮತ್ತು ಅಹಂಕಾರವುಳ್ಳ, ಕಾಮ ಮತ್ತು ರಾಗದ ಬಲದಿಂದ ಪ್ರೇರಿತರಾದ, ಶಾಸ್ತ್ರೀಯ ವಿಧಿಯಿಲ್ಲದೆ ಘೋರ ತಪವನ್ನು ಮಾಡುವ, ಮೂಢ ಜನರು ಶರೀರವಲ್ಲಿರುವ ಪಂಚಮಹಾಭೂತಗಳನ್ನು ಕಷ್ಟಗೊಳಿಸುವದಲ್ಲದೆ ಅಂತಃಕರಣದಲ್ಲಿಗುವ ನನಗೆ ಕೂಡ ಕಷ್ಟ ಕೊಡುತ್ತಾರೆ ಇಂತಹರನ್ನು ಆಸುರೀ ನಿಶ್ಚಯವುಳ್ಳವರೆಂದು ತಿಳಿ. ೫,೬

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು

ಆಹಾರವು ಕೂಡ ಮೂರು ಪ್ರಕಾರವಾಗಿ ಪ್ರಿಯವಾಗಿರುತ್ತದೆ. ಅದೇ ರೀತಿಯಲ್ಲಿ ಯಜ್ಞ, ತಪಸ್ಸು, ಮತ್ತು ದಾನ, ಇವು (ಕೂಡ ಮೂರು ಪ್ರಕಾರವಾಗಿ ಪ್ರಿಯವಾಗಿ) ಇರುತ್ತವೆ. ಆದರ ಈ ಭೇದವನ್ನು ನೀನು ಕೇಳು. ೭

ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ

ಆಯುಷ್ಯ, ಸಾತ್ವಿಕತೆ, ಬಲ, ಆರೋಗ್ಯ, ಸುಖ ಮತ್ತು ರುಚಿ, ಇವುಗಳನ್ನು ಹೆಚ್ಚಿಸುವ, ರಸವುಳ್ಳ, ಜಿಡ್ಡುಳ್ಳ, ಪುಷ್ಟಿಯನ್ನು ಕೊಡುವ ಮತ್ತು ಮನಸ್ಸನ್ನು ಸಂತೋಷಪಡಿಸುವ ಆಹಾರಗಳು ಸಾತ್ವಿಕರಿಗೆ ಪ್ರಿಯವಾಗಿರುತ್ತವೆ. ೮

ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ

ಕಹಿ, ಹುಳಿ, ಉಪ್ಪು, ಅತಿ ಉಷ್ಣ, ಕಾರ, ಒರಟು ಮತ್ತು ಬಾಯಾರಿಕೆಯನ್ನುಂಟುಮಾಡುವ ಆಹಾರಗಳು ರಾಜಸರಿಗೆ ಪ್ರಿಯ

ವಾಗಿರುತ್ತವೆ ಮತ್ತು ಅವುಗಳಿಂದ ದುಃಖವೂ ಶೋಕವೂ ರೋಗವೂ ಉತ್ಪನ್ನವಾಗುತ್ತವೆ. ೯

ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ

ಒಂದು ಜಾವದಿಂದಲೂ ಬಿದ್ದಿರುವ, ನೀರಸವಾದ, ಕೆಟ್ಟ ವಾಸನೆಯುಳ್ಳ, ಹಳಸಿರುವ, ಎಂಜಲಾದ, ಅಪವಿತ್ರವಾದ ಭೋಜನವು ತಾಮಸರಿಗೆ ಪ್ರಿಯವು. ೧೦

ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ

ಫಲದ ಇಚ್ಛೆಯಿಲ್ಲದೆ, ವಿಧಿಪೂರ್ವಕವಾಗಿ, ಕರ್ತವ್ಯವೆಂದೆಣಿಸಿ, ಅದರಲ್ಲಿ ಮನಸ್ಸಿಟ್ಟು ಮಾಡಿದ ಯಜ್ಞವು ಸಾತ್ತ್ವಿಕವಾದುದು. ೧೧

ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ

ಎಲೈ ಭರತ ಶ್ರೇಷ್ಠನೆ, ಫಲದ ಉದ್ದೇಶದಿಂದಲೂ ದಂಭದಿಂದಲೂ ಮಾಡಿದ ಯಜ್ಞವು ರಾಜಸವಾದುದೆಂದು ತಿಳಿ. ೧೨

ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ

ವಿಧಿಯಿಲ್ಲದೆ, ಅನ್ನ ಮಾಡದೆ, ಮಂತ್ರವಿಲ್ಲದೆ, ತ್ಯಾಗವಿಲ್ಲದೆ, ಶ್ರದ್ಧೆಯಿಲ್ಲದೆ [ಮಾಡಿದ] ಯಜ್ಞವನ್ನು ಧೀಮಂತರು ತಾಮಸ ಯಜ್ಞವೆಂದು ಹೇಳುತ್ತಾರೆ. ೧೩

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ

ದೇವ, ಬ್ರಾಹ್ಮಣ, ಗುರು ಮತ್ತು ಜ್ಞಾನಿ, ಇವರುಗಳ ಪೂಜೆ, ಪವಿತ್ರತೆ, ಸರಳತೆ, ಬ್ರಹ್ಮಚರ್ಯ, ಅಹಿಂಸೆ—ಇದು ಶಾರೀರಿಕ ತಪಸ್ಸೆಂದೆನಿಸಿಕೊಳ್ಳುತ್ತದೆ. ೧೪

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ

ದುಃಖಗೊಳಿಸದಂತಹ, ಸತ್ಯವಾದ, ಪ್ರಿಯವಾದ, ಹಿತಕರವಾದ ಮಾತು ಮತ್ತು ಧರ್ಮಗ್ರಂಥಗಳ ಅಭ್ಯಾಸ—ಇದು ವಾಚಿಕ ತಪವೆನಿಸಿಕೊಳ್ಳುತ್ತದೆ. ೧೫

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ

ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮಸಂಯಮ, ಭಾವಶುದ್ಧಿ—ಇದು ಮಾನಸಿಕ ತಪಸ್ಸೆಂದೆನಿಸಿಕೊಳ್ಳುತ್ತದೆ. ೧೬

ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ

ಸಮತಾಭಾವವುಳ್ಳ ಪುರುಷರು ಫಲದಾಸೆಯನ್ನು ಬಿಟ್ಟು ಪರಮಶ್ರದ್ಧೆಯಿಂದ ಈ ಮೂರು ತೆರದ ತಪಸ್ಸನ್ನು ಮಾಡಿದರೆ ಅದನ್ನು ಧೀಮಂತರು ಸಾತ್ತ್ವಿಕ ತಪಸ್ಸೆಂದು ಕರೆಯುತ್ತಾರೆ. ೧೭

ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್

ಸತ್ಕಾರ, ಮಾನ, ಪೂಜೆ, ಇವುಗಳಿಗಾಗಿ ದಂಭದಿಂದ ಮಾಡಿದ ಅಸ್ಥಿರ, ಅನಿಶ್ಚಿತ ತಪಸ್ಸು ರಾಜಸವೆನಿಸಿಕೊಳ್ಳುತ್ತದೆ. ೧೮

ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ

ಕಷ್ಟಪಟ್ಟುಕೊಂಡು, ದುರಾಗ್ರಹದಿಂದ ಅಥವಾ ಇತರರ ನಾಶಕ್ಕಾಗಿ [ಮಾಡಿದ] ತಪಸ್ಸು ತಾಮಸವೆನಿಸಿಕೊಳ್ಳುತ್ತದೆ. ೧೯

ದಾತವ್ಯಮಿತಿ ಯದ್ದಾನಂ ದೀಯತೇನುಪಕಾರಿಣೇ
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಂ

ಕೊಡುವದುಚಿತವೆಂದೆಣಿಸಿ, ಪ್ರತಿಫಲಾಪೇಕ್ಷೆಯಿಲ್ಲದೆ, ದೇಶ ಕಾಲ ಪಾತ್ರಗಳನ್ನು ನೋಡಿ [ಕೊಟ್ಟ] ದಾನವನ್ನು ಸಾತ್ವಿಕ ದಾನವೆಂದು ಹೇಳಿದ್ದಾರೆ. ೨೦

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಂ

ಪ್ರತಿಫಲವನ್ನು ಹೊಂದಲಿಕ್ಕಾಗಿ ಅಥವಾ ಫಲವನ್ನು ಲಕ್ಷ್ಯದಲ್ಲಿಟ್ಟುಕೊಂಡು, ದುಃಖದಿಂದ, ಕೊಟ್ಟ ದಾನವು ರಾಜಸವೆಂದು ಹೇಳಲ್ಪಟ್ಟದೆ. ೨೧

ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ

ದೇಶಕಾಲಪಾತ್ರಗಳ ವಿಚಾರವನ್ನು ಮಾಡದೆ ಮನ್ನಣೆಯಿಲ್ಲದೆ, ತಿರಸ್ಕಾರದಿಂದ ಕೊಟ್ಟ ದಾನವು ತಾಮಸವೆನಿಸಿಕೊಳ್ಳುತ್ತದೆ. ೨೨

ಓಂತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ

ಬ್ರಹ್ಮನ ವರ್ಣನೆಯು 'ಓಂ ತತ್ ಸತ್', ಈ ರೀತಿ ಮೂರು ಬಗೆಯಾಗಿ ಮಾಡಲ್ಪಟ್ಟದೆ ಮತ್ತು ಇದರ ಮೂಲಕ ಪೂರ್ವಕಾಲದಲ್ಲಿ ಬ್ರಾಹ್ಮಣ, ವೇದ ಮತ್ತು ಯಜ್ಞ, ಇವು ನಿರ್ಮಿತವಾದುವು. ೨೩

ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಂ

ಆದುದರಿಂದ ಬ್ರಹ್ಮವಾದಿಗಳು ಓಂ[ಕಾರ]ದ ಉಚ್ಚಾರಣೆಯನ್ನು ಮಾಡಿ, ದಾನರೂಪದ ಮತ್ತು ತಪೋರೂಪದ ಕ್ರಿಯೆಗಳನ್ನು ಸದಾ ವಿಧಿಪೂರ್ವಕವಾಗಿ ಮಾಡುತ್ತಾರೆ. ೨೪

ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ

ಮತ್ತು ಮೋಕ್ಷವನ್ನು ಬಯಸುವವನು ತತ್ [ಪದ] ವನ್ನು ಉಚ್ಚರಿಸಿ, ಫಲದ ಆಸೆಯನ್ನಿಟ್ಟುಕೊಳ್ಳದೆ, ಯಜ್ಞ, ತಪಸ್ಸು, ದಾನಗಳೆಂಬ ವಿವಿಧ ಕ್ರಿಯೆಗಳನ್ನು ಮಾಡುತ್ತಾನೆ. ೨೫

ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ

ಸತ್ಯ ಮತ್ತು ಕಲ್ಯಾಣ ಎಂಬ ಅರ್ಥದಲ್ಲಿ ಸತ್ ಶಬ್ದವು ಪ್ರಯೋಗಿಸಲ್ಪಡುತ್ತದೆ. ಮತ್ತು, ಎಲೈ ಪಾರ್ಥನೆ, ಒಳ್ಳೆಯ ಕೆಲಸಗಳಲ್ಲಿಯೂ ಸತ್ ಶಬ್ದವು ಉಪಯೋಗಿಸಲ್ಪಡುತ್ತದೆ. ೨೬

ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ

ಯಜ್ಞ, ತಪಸ್ಸು, ದಾನಗಳಲ್ಲಿ ದೃಢತೆಯನ್ನೂ ಸತ್ ಎಂದು ಹೇಳುತ್ತಾರೆ. 'ತತ್' ದ ನಿಮಿತ್ತವೇ ಕರ್ಮವು, ಎಂಬ ಸಂಕಲ್ಪವೂ ಸತ್ ಎನಿಸಿಕೊಳ್ಳುತ್ತದೆ. ೨೭

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ

ಎಲೈ ಪಾರ್ಥನೆ, ಶ್ರದ್ಧೆಯಿಲ್ಲದೆ [ಮಾಡಿದ] ಯಜ್ಞವಾಗಲಿ ದಾನವಾಗಲಿ, ತಪಸ್ಸಾಗಲಿ, ಇನ್ನಾವ ಕೆಲಸವಾಗಲಿ, ಅಸತ್ ಎನಿಸಿಕೊಳ್ಳುತ್ತದೆ. ಅದು ಇಲ್ಲಿಯೂ ಕೆಲಸಕ್ಕೆ ಬರುವದಿಲ್ಲ, ಪರಲೋಕದಲ್ಲಿಯೂ ಬರುವದಿಲ್ಲ.

ಟಿಪ್ಪಣಿ—ಮೇಲಿನ ಮೂರು ಶ್ಲೋಕಗಳ ಭಾವಾರ್ಥವೇನೆಂದರೆ, ಪ್ರತಿಯೊಂದು ಕರ್ಮವನ್ನೂ ಈಶ್ವರಾರ್ಪಣ ಮಾಡಿಯೇ ಎಸಗಬೇಕು. ಏಕೆಂದರೆ, ಓಂಕಾರವೇ ಸತ್, ಸತ್ಯವು. ಅದನ್ನು ಅರ್ಪಣ ಮಾಡಿಯೇ ಅದು ಅಂಕುರಿಸುವದು.

ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅರ್ಥಾತ್ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಶ್ರದ್ಧಾತ್ರಯವಿಭಾಗಯೋಗವೆಂಬ ಹದಿನೇಳನೆಯ ಅಧ್ಯಾಯವು ಸಮಾಪ್ತವಾದುದು.



# ೧೮

# ಸಂನ್ಯಾಸಯೋಗ



ಈ ಅಧ್ಯಾಯವು ಉಪಸಂಹಾರರೂಪವಾಗಿದೆಯೆಂದೆಣಿಸಬಹುದು. ‘ಎಲ್ಲ ಧರ್ಮಗಳನ್ನೂ ತ್ಯಜಿಸಿ ನನ್ನನ್ನು ಶರಣು ಹೊಗು’ ಎಂಬುದೇ ಇದರ, ಅಥವಾ ಗೀತೆಯ, ಪ್ರೇರಕ ಮಂತ್ರವೆಂದೆನಿಸಿಕೊಳ್ಳುತ್ತದೆ. ಇದು ನಿಜವಾದ ಸಂನ್ಯಾಸ. ಪರಂತು ಎಲ್ಲಾ ಧರ್ಮಗಳ ತ್ಯಾಗವೆಂದರೆ ಎಲ್ಲಾ ಕರ್ಮಗಳ ತ್ಯಾಗವೆಂದು ಅರ್ಥವಲ್ಲ. ಪರೋಪಕಾರದ ಕರ್ಮಗಳಲ್ಲಿಯೂ ಸರ್ವೋತ್ಕೃಷ್ಟವಾದವುಗಳನ್ನು ಆತನಿಗೆ ಅರ್ಪಣ ಮಾಡುವದು ಮತ್ತು ಫಲದ ಆಸೆಯನ್ನು ಬಿಡುವದು—ಇದು ಸರ್ವಧರ್ಮತ್ಯಾಗ ಅಥವಾ ಸಂನ್ಯಾಸ.

ಅರ್ಜುನ ಉವಾಚ—

ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಂ
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ

ಅರ್ಜುನನು ಹೇಳಿದನು—

ಎಲೈ ಮಹಾಬಾಹುವೆ, ಹೇ ಹೃಷೀಕೇಶ, ಹೇ ಕೇಶಿನಿಷೂದನ, ಸನ್ಯಾಸ ಮತ್ತು ತ್ಯಾಗ, ಇವುಗಳ ರಹಸ್ಯವನ್ನು ಬೇರೆ ಬೇರೆಯಾಗಿ ಅರಿಯಲಿಚ್ಛಿಸುತ್ತೇನೆ ೧

ಶ್ರೀ ಭಗವಾನುವಾಚ —

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ

ಶ್ರೀ ಭಗವಂತನೆಂದನು—

ಕಾಮ್ಯ (ಕಾಮನೆಯಿಂದ ಉತ್ಪನ್ನವಾದ) ಕರ್ಮಗಳ ತ್ಯಾಗವನ್ನು ಜ್ಞಾನಿಗಳು ಸಂನ್ಯಾಸವೆಂಬ ಹೆಸರಿನಿಂದ ಅರಿಯುತ್ತಾರೆ. ಎಲ್ಲಾ ಕರ್ಮಗಳ ಫಲದ ತ್ಯಾಗವನ್ನು ಧೀಮಂತರು ತ್ಯಾಗವೆಂದು ಹೇಳುತ್ತಾರೆ. ೨

ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ

ಎಲ್ಲಾ ಕರ್ಮಗಳೂ ದೋಷಮಯವಾಗಿರುವವದರಿಂದ [ಅವು] ತ್ಯಜಿಸತಕ್ಕವೆಂದು ಅನೇಕ ವಿಚಾರಶೀಲ ಪುರುಷರು ಹೇಳುತ್ತಾರೆ; ಇತರರು ಹೇಳುವದೇನೆಂದರೆ, ಯಜ್ಞದಾನತಪೋರೂಪ ಕರ್ಮಗಳು ತ್ಯಜಿಸತಕ್ಕವಲ್ಲ. ೩

ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ

ಹೇ ಭರತಸತ್ತಮ, ಈ ತ್ಯಾಗದ ವಿಷಯದಲ್ಲಿ ನನ್ನ ತೀರ್ಮಾನವನ್ನು ಕೇಳು. ಎಲೈ ಪುರುಷವ್ಯಾಘ್ರನೆ, ತ್ಯಾಗವು ಮೂರು ವಿಧವಾಗಿ ವರ್ಣಿಸಲ್ಪಟ್ಟಿದೆ. ೪

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ

ಯಜ್ಞದಾನತಪೋರೂಪ ಕರ್ಮಗಳು ತ್ಯಜಿಸತಕ್ಕವಲ್ಲ, [ಅವು] ಮಾಡತಕ್ಕವು. ಯಜ್ಞ, ದಾನ, ತಪಸ್ಸು, ಇವು ವಿವೇಕಿಯನ್ನು ಪಾವನಗೊಳಿಸುತ್ತವೆ. ೫

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ

ಎಲೈ ಪಾರ್ಥನೆ, ಈ ಕರ್ಮಗಳನ್ನು ಕೂಡ ಆಸಕ್ತಿಯನ್ನೂ ಫಲದಾಸೆಯನ್ನೂ ಬಿಟ್ಟು ಮಾಡಬೇಕೆಂದು ನನ್ನ ನಿಶ್ಚಿತ, ಉತ್ತಮ, ಅಭಿಪ್ರಾಯ. ೬

ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ

ನಿಯತ ಕರ್ಮದ ತ್ಯಾಗವು ಉಚಿತವಲ್ಲ. ಮೋಹವಶನಾಗಿ ಅದನ್ನು ಬಿಟ್ಟರೆ ಆ ತ್ಯಾಗವು ತಾಮಸವೆಂದೆಣಿಸಲ್ಪಡುತ್ತದೆ. ೭

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್

ದುಃಖಕರವಾದುದೆಂದೆಣಿಸಿ, ಕಾಯಕಷ್ಟದ ಭಯದಿಂದ ಮಾಡಿದ ಕರ್ಮತ್ಯಾಗವು ರಾಜಸವಾದುದು. ಅದರಿಂದ ತ್ಯಾಗದ ಫಲವು ಲಭಿಸುವದಿಲ್ಲ. ೮

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ

ಹೇ ಅರ್ಜುನ, ಮಾಡಬೇಕು ಎಂಬ ತಿಳಿವಳಿಕೆಯಿಂದ, ಸಂಗವನ್ನೂ ಫಲವನ್ನೂ ತ್ಯಜಿಸಿ, ನಿಯತ ಕರ್ಮವನ್ನು ಮಾಡಿದರೆ, ಆ ತ್ಯಾಗವೇ ಸಾತ್ವಿಕವೆಂದೆಣಿಸಲ್ಪಡುತ್ತದೆ. ೯

ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ

ಸಂಶಯರಹಿತನಾದ, ಶುದ್ಧ ಭಾವನೆಗಳುಳ್ಳವನಾದ ತ್ಯಾಗಿಯೂ ಧೀಮಂತನೂ ಕಷ್ಟಕರವಾದ ಕರ್ಮಗಳನ್ನು ದ್ವೇಷಿಸುವದಿಲ್ಲ, ಸುಲಭವಾದವುಗಳಲ್ಲಿ ಲೀನನಾಗುವದಿಲ್ಲ. ೧೦

ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ

ದೇಹಧಾರಿಗೆ ಕರ್ಮವನ್ನು ಸಂಪೂರ್ಣವಾಗಿ ಬಿಡುವದು ಸಾಧ್ಯವಲ್ಲ. ಪರಂತು ಕರ್ಮಫಲವನ್ನು ತ್ಯಜಿಸುವವನು ತ್ಯಾಗಿಯೆನಿಸಿಕೊಳ್ಳುತ್ತಾನೆ. ೧೧

ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್

ತ್ಯಾಗವಮಾಡದಿರುವವನ ಕರ್ಮದ ಫಲವು ಕಾಲಾಂತರದಲ್ಲಿ ಮೂರು ವಿಧದ್ದಾಗಿರುತ್ತದೆ—ಅಶುಭ, ಶುಭ ಮತ್ತು ಶುಭಾಶುಭ. ತ್ಯಾಗಿ(ಸಂನ್ಯಾಸಿ)ಯಾದವನಿಗೆ ಅದೆಂದಿಗೂ ಆಗುವದಿಲ್ಲ. ೧೨

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ

ಎಲೈ ಮಹಾಬಾಹುವೆ, ಎಲ್ಲಾ ಕರ್ಮದ ಸಿದ್ಧಿಗಾಗಿ ಸಾಂಖ್ಯಶಾಸ್ತ್ರದಲ್ಲಿ ಐದು ಕಾರಣಗಳು ಹೇಳಲ್ಪಟ್ಟಿವೆ. ಅವನ್ನು ನನ್ನಿಂದ ಕೇಳು. ೧೩

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ

ಆ ಐದು ಏನೆಂದರೆ—ಕ್ಷೇತ್ರ, ಕರ್ತೃ, ಭಿನ್ನಭಿನ್ನ ಸಾಧನಗಳು, ಭಿನ್ನಭಿನ್ನ ಕ್ರಿಯೆಗಳು ಮತ್ತು ಐದನೆಯದಾದ ದೈವವು. ೧೪

ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ

ಯಾರೊಬ್ಬನು, ಶರೀರ, ಮಾತು ಅಥವಾ ಮನಸ್ಸಿನಿಂದ ಯಾವ ಕರ್ಮವನ್ನು—ಅದು ನೀತಿ ಸಮ್ಮತವಾಗಿರಲಿ, ನೀತಿ ವಿರುದ್ಧ ವಾಗಿರಲಿ—ಮಾಡಿದರೂ ಅದಕ್ಕೆ ಈ ಐದು ಕಾರಣಗಳು ಇರುತ್ತವೆ. ೧೫

ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ

ಹೀಗಿದ್ದರೂ ಅಸಂಸ್ಕೃತ ಬುದ್ಧಿಯ ಕಾರಣ ತಾನೇ ಕರ್ತೃ ವೆಂದೆಣಿಸುವ ದುರ್ಮತಿಗೆ ಏನೂ ತಿಳಿಯದು. ೧೬

ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ
ಹತ್ವಾಪಿ ಸ ಇಮಾಂಲ್ಲೋಕಾನ್ನ ಹಂತಿ ನ ನಿಬದ್ಯತೇ

ಯಾರಲ್ಲಿ ಅಹಂಕಾರಭಾವವಿಲ್ಲವೋ, ಯಾರ ಬುದ್ಧಿಯು ಮಲಿನವಾಗಿಲ್ಲವೊ ಆವನು ಈ ಜಗತ್ತನ್ನು ಸಂಹರಿಸಿದರೂ ಸಂಹರಿಸುವದಿಲ್ಲ, [ಅದರಿಂದ ಅವನು] ಬಂಧನದಲ್ಲಿ [ಯೂ] ಬೀಳುವದಿಲ್ಲ. ೧೭

ಟಿಪ್ಪಣಿ—ಹೊರಗಣ ಅರ್ಥದಲ್ಲಿ ಮಾತ್ರ ದೃಷ್ಟಿಯಿಟ್ಟು ಓದಿದರೆ ಈ ಶ್ಲೋಕವು ಮನುಷ್ಯನಿಗೆ ತಪ್ಪು ಅರ್ಥ ಕೊಡುವದಾಗಿದೆ. ಗೀತೆಯ ಅನೇಕ ಶ್ಲೋಕಗಳು ಕಾಲ್ಪನಿಕ ಆದರ್ಶಗಳನ್ನವಲಂಬಿಸಿರುವವಾಗಿವೆ. ಅದರ ಸಹಜ ದೃಷ್ಟಾಂತವು ಪ್ರಪಂಚದಲ್ಲಿ ದೊರಕಲಾರದು, ಮತ್ತು ಕೇವಲ ಉಪಯೋಗಕ್ಕಾಗಿ ರೇಖಾಗಣಿತದಲ್ಲಿ ಕಾಲ್ಪನಿಕ ಆದರ್ಶಆಕೃತಿಗಳಿಗೆ ಆವಶ್ಯಕತೆಯಿದ್ದಂತೆಯೇ ಧರ್ಮ ವ್ಯವಹಾರಕ್ಕಾಗಿಯೂ [ಆವಶ್ಯಕತೆ] ಉಂಟು. ಆದುದರಿಂದ ಈ ಶ್ಲೋಕಕ್ಕೆ ಹೀಗೆ ಅರ್ಥ ಮಾಡಲು ಸಾಧ್ಯ—ಯಾರ ಅಹಂಭಾವವು ಮಣ್ಣಾಗಿ ಹೋಗಿದೆಯೊ ಮತ್ತು ಯಾರ ಬುದ್ಧಿಯಲ್ಲಿ ಲೇಶಮಾತ್ರವೂ ಕೊಳೆಯಿಲ್ಲವೊ, ಆತನು ಜಗತ್ತನ್ನೆಲ್ಲಾ ಕೊಲ್ಲಬಾರದೇಕೆ ಎಂದು ಹೇಳಬಹುದು. ಪರಂತು ಅಹಂಭಾವವಿಲ್ಲದವನಿಗೆ ಶರೀರವೇ ಇಲ್ಲ. ಯಾರ ಬದ್ಧಿಯು ವಿಶುದ್ಧವೊ, ಅವನು ತ್ರಿಕಾಲದರ್ಶಿ. ಇಂತಹ ಪುರುಷನು ಕೇವಲ ಭಗವಂತನೊಬ್ಬನೇ. ಆತನು [ಕರ್ಮ] ಮಾಡುತ್ತಿದ್ದರೂ ಅಕರ್ತನು; ಕೊಲ್ಲುತ್ತಿದ್ದರೂ ಅಹಿಂಸಕನು. ಇದರಿಂದ ಮನುಷ್ಯನಿದಿರಿಗಿರುವ ಮಾರ್ಗವು ಒಬ್ಬರನ್ನೂ ಕೊಲ್ಲದಿರುವ ವತ್ತು ಶಿಷ್ಟಾಚಾರದ—ಶಾಸ್ತ್ರದ—ಮಾರ್ಗವೊಂದೇ.

ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ

ಕರ್ಮದ ಪ್ರೇರಣೆಯಲ್ಲಿ ಮೂರು ತತ್ವಗಳಿವೆ—ಜ್ಞಾನ, ಜ್ಞೇಯ ಮತ್ತು ಪರಿಜ್ಞಾತೃ. ಕರ್ಮದ ಅಂಗಗಳು ಮೂರು ಬಗೆಯವು—ಇಂದ್ರಿಯಗಳು, ಕ್ರಿಯೆ ಮತ್ತು ಕರ್ತೃ. ೧೮

ಟಿಪ್ಪಣಿ-ಇದರಲ್ಲಿ ವಿಚಾರ ಮತ್ತು ಆಚಾರದ ಸಮೀಕರಣವಿದೆ. ಮೊದಲು ಮನುಷ್ಯನು ಕರ್ತವ್ಯ ಕರ್ಮ (ಜ್ಞೇಯ)ದ ವಿಧಿ (ಜ್ಞಾನ) ಯನ್ನರಿಯುತ್ತಾನೆ—ಪರಿಜ್ಞಾತೃವಾಗುತ್ತಾನೆ, ಈ ಕರ್ಮಪ್ರೇರಣೆಯ ನಂತರ ಇಂದ್ರಿಯಗಳ (ಕರಣ) ಮೂಲಕ ಕ್ರಿಯೆಯ ಕರ್ತೃವಾಗುತ್ತಾನೆ. ಇದು ಕರ್ಮಸಂಗ್ರಹ.

ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ

ಜ್ಞಾನ, ಕರ್ಮ ಮತ್ತು ಕರ್ತೃ, ಇವು ಗುಣಭೇದಕ್ಕನುಸಾರವಾಗಿ ಮೂರು ಬಗೆಯಾಗಿವೆ. ಗುಣಗಳ ಎಣಿಕೆಯಲ್ಲಿ ಅವುಗಳ ವರ್ಣನೆಯಿರುವಂತೆಯೇ [ಇದನ್ನೂ ಹೇಳುವೆನು,] ಕೇಳು. ೧೯

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ರಾಜಸಂ

ಯಾವದರ ಮೂಲಕ ಮನುಷ್ಯನು ಸಮಸ್ತ ಭೂತಗಳಲ್ಲಿಯೂ ಒಂದೇ ಅವಿನಾಶಿಯಾದ ಭಾವವನ್ನೂ ವೈವಿಧ್ಯದಲ್ಲಿ ಏಕತೆಯನ್ನೂ ಕಾಣುವನೊ ಅದನ್ನು ಸಾತ್ವಿಕ ಜ್ಞಾನವೆಂದು ತಿಳಿ. ೨೦

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ

ಯಾವದರ ಮೂಲಕ ಮನುಷ್ಯನು ನೋಡುವದಕ್ಕೆ ಭಿನ್ನ ಭಿನ್ನವಾಗಿರುವ ಕಾರಣ ಸಮಸ್ತ ಭೂತಗಳಲ್ಲಿಯೂ ಭಿನ್ನಭಿನ್ನ, ವಿಭಕ್ತ, ಭಾವಗಳನ್ನು ಕಾಣುವನೊ ಆ ಜ್ಞಾನವನ್ನು ರಾಜಸವೆಂದು ತಿಳಿ. ೨೧

ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಂ
ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ

ಯಾವದರ ಮೂಲಕ ಒಂದೇ ಕಾರ್ಯದಲ್ಲಿ ಯಾವ ಕಾರಣವೂ ಇಲ್ಲದೆ ಎಲ್ಲವೂ ಪ್ರವೇಶಿಸುವಂತೆ ಭಾಸವಾಗುವುದೊ, ಯಾವದು ರಹಸ್ಯವಿಲ್ಲದುದೊ, ತುಚ್ಛವೊ, ಅದು ತಾಮಸ ಜ್ಞಾನವೆಂದೆನಿಸಿಕೊಳ್ಳುತ್ತದೆ. ೨೨

ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ

ಫಲದಾಸೆಯಿಲ್ಲದ ಪುರುಷನು ಆಸಕ್ತಿಯೂ ರಾಗದ್ವೇಷವೂ ಇಲ್ಲದೆ ಮಾಡಿದ ನಿಯತ ಕರ್ಮವು ಸಾತ್ವಿಕವೆನಿಸಿಕೊಳ್ಳುತ್ತದೆ. ೨೩

ಟಿಪ್ಪಣಿ—ಅ. ೩, ಶ್ಲೋ. ೮. ರ ಟಿಪ್ಪಣಿಯನ್ನು ನೋಡಿ.

ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ

ಭೋಗದ ಇಚ್ಛೆಯನ್ನಿಟ್ಟುಕೊಂಡಿರುವವರು ಯಾವ ಕಾರ್ಯವನ್ನು 'ನಾನು ಮಾಡುತ್ತೇನೆ' ಎಂಬ ಭಾವದಿಂದ ಸಂಭ್ರಮದಿಂದ ಮಾಡುತ್ತಾರೊ ಅದು ರಾಜಸವೆನಿಸಿಕೊಳ್ಳುತ್ತದೆ. ೨೪

ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಂ
ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಂ

ಯಾವ ಕರ್ಮವನ್ನು ಪರಿಣಾಮದ, ಹಾನಿಯ, ಹಿಂಸೆಯ ಮತ್ತು ತನ್ನ ಶಕ್ತಿಯ, ವಿಚಾರವನ್ನು ಮಾಡದೆ, ಮೋಹವಶನಾಗಿ ಮನುಷ್ಯನು ಪ್ರಾರಂಭಿಸುತ್ತಾನೊ ಅದು ತಾಮಸ ಕರ್ಮವೆಂದೆನಿಸಿಕೊಳ್ಳುತ್ತದೆ. ೨೫

ಮುಕ್ತಸಂಗೋನಹಂವಾದೀ ಧೃತ್ಯುತ್ಸಾಹಸಮನ್ವಿತಃ
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ

ಯಾರು ಆಸಕ್ತಿಯಿಲ್ಲದೆ, ಅಹಂಕಾರವಿಲ್ಲದೆ ಇರುವನೊ, ಯಾರಲ್ಲಿ ದೃಢತೆಯೂ ಉತ್ಸಾಹವೂ ಉಂಟೊ, ಯಾರು ಸಫಲತೆ ನಿಷ್ಫಲತೆಗಳಿಂದ ಹರ್ಷಶೋಕಗಳನ್ನು ಹೊಂದುವದಿಲ್ಲವೊ, ಅವನು ಸಾತ್ವಿಕ ಕರ್ತೃವೆನಿಸಿಕೊಳ್ಳುತ್ತಾನೆ. ೨೬

ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ

ರಾಗವುಳ್ಳವನು, ಕರ್ಮಫಲದ ಇಚ್ಛೆಯುಳ್ಳವನು, ಲೋಭಿಯು, ಹಿಂಸಕನು, ಮಲಿನನು, ಹರ್ಷಶೋಕಗಳಿಂದ ಕೂಡಿದವನು[—ಇಂತಹನು] ರಾಜಸ ಕರ್ತೃವೆನಿಸಿಕೊಳ್ಳುತ್ತಾನೆ. ೨೭

ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ

ಅವ್ಯವಸ್ಥಿತನೂ ಅಸಂಸ್ಕಾರಿಯೂ ಹರಟಿಮಲ್ಲನೂ ಶಠನೂ ನೀಚನೂ ಅಲಸಿಯೂ ಅಪ್ರಸನ್ನಚಿತ್ತನೂ ಆದವನು ತಾಮಸ ಕರ್ತೃವೆನಿಸಿಕೊಳ್ಳುತ್ತಾನೆ. ೨೮

ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ

ಎಲೈ ಧನಂಜಯನೆ, ಬುದ್ಧಿ ಮತ್ತು ಧೃತಿ, ಇವುಗಳ ಗುಣಕ್ಕನುಸಾರವಾಗಿ ಸಂಪೂರ್ಣವಾಗಿ ಮತ್ತು ಬೇರೆಬೇರೆಯಾಗಿ ಮೂರು ಬಗೆಗಳನ್ನು ಹೇಳುವೆನು. ಅದನ್ನು ಕೇಳು. ೨೯

ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ

ಪ್ರವೃತ್ತಿ, ನಿವೃತ್ತಿ, ಕಾರ್ಯ, ಅಕಾರ್ಯ, ಭಯ, ಅಭಯ, ಬಂಧ, ಮೋಕ್ಷ, ಇವುಗಳ ಭೇದವನ್ನು (ಉಚಿತ ರೀತಿಯಿಂದ) ತಿಳಿಯುವ ಬುದ್ಧಿಯು ಸಾತ್ವಿಕವಾದುದು ೩೦

ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ

ಧರ್ಮ-ಅಧರ್ಮ, ಕಾರ್ಯ-ಅಕಾರ್ಯ, ಇವುಗಳ ವಿವೇಚನೆಯನ್ನು ಅನುಚಿತ ರೀತಿಯಿಂದ ಮಾಡುವ ಬುದ್ಧಿಯು, ಎಲೈ ಪಾರ್ಥನೆ, ರಾಜಸವಾದುದು. ೩೧

ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ

ಹೇ ಪಾರ್ಥ, ಅಂಧಕಾರದಿಂದ ಆವರಿಸಲ್ಪಟ್ಟು, ಅಧರ್ಮವನ್ನು ಧರ್ಮವೆಂದೆಣಿಸಿ ಎಲ್ಲಾ ವಿಷಯಗಳನ್ನೂ ತಲೆಕೆಳಗಾಗಿಯೇ ನೋಡುವ ಬುದ್ಧಿಯು ತಾಮಸವಾದುದು. ೩೨

ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ

ಯಾವ ಏಕನಿಷ್ಠ ಧೃತಿಯಿಂದ ಮನುಷ್ಯನು ಮನಸ್ಸು, ಪ್ರಾಣ, ಮತ್ತು ಇಂದ್ರಿಯಗಳ ಕ್ರಿಯೆಯನ್ನು ಸಾಮ್ಯಬುದ್ಧಿಯಿಂದ ಧಾರಣೆಮಾಡುತ್ತಾನೊ ಆ ಧೃತಿಯು ಸಾತ್ವಿಕವಾದುದು. ೩೩

ಯಯಾ ತು ಧರ್ಮಕಾಮಾರ್ಥಾನ್ಧೃತ್ಯಾ ಧಾರಯತೇಽರ್ಜುನ
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ

ಎಲೈ ಪಾರ್ಥನೆ, ಯಾವ ಧೃತಿಯಿಂದ ಮನುಷ್ಯನು ಫಲಾಕಾಂಕ್ಷಿಯಾಗಿ ಧರ್ಮ, ಕಾಮ, ಅರ್ಥಗಳನ್ನು ಆಸಕ್ತಿಯಿಂದ ಧಾರಣೆಮಾಡುತ್ತಾನೊ, ಆ ಧೃತಿಯು ರಾಜಸವಾದುದು. ೩೪

ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ

ಯಾವ ಧೃತಿಯಿಂದ ದುರ್ಬುದ್ಧಿಯುಳ್ಳ ಮನುಷ್ಯನು ನಿದ್ರೆ, ಭಯ, ಶೋಕ, ನಿರಾಸೆ ಮತ್ತು ಮದ, ಇವುಗಳನ್ನು ಬಿಡಲಾರನೊ, ಅದು, ಎಲೈ ಪಾರ್ಥನೆ, ತಾಮಸವಾದ ಧೃತಿಯು. ೩೫

ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ
ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ
ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ

ಹೇ ಭರತರ್ಷಭ, ಈಗ ಮೂರು ಬಗೆಯ ಸುಖದ ವರ್ಣನೆಯನ್ನು ನನ್ನಿಂದ ಕೇಳು. ಯಾವದರ ಅಭ್ಯಾಸದಿಂದ ಮನುಷ್ಯನು ಪ್ರಸನ್ನನಾಗಿರುವನೊ, ಯಾವದರಿಂದ ದುಃಖವು ಕೊನೆಗಾಣುವುದೊ, ಯಾವದು ಆರಂಭದಲ್ಲಿ ವಿಷಸಮಾನವಾಗಿ ತೋರಿ ಪರಿಣಾಮದಲ್ಲಿ ಅಮೃತಸಮಾನವಾಗುವುದೊ, ಯಾವದು ಆತ್ಮಜ್ಞಾನದ ಪ್ರಸನ್ನತೆಯೊಳಗಿಂದ ಉತ್ಪನ್ನವಾಗುವುದೊ, ಅದು ಸಾತ್ವಿಕಸುಖವೆನಿಸಿಕೊಳ್ಳುತ್ತದೆ. ೩೬-೩೭

ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಂ
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ

ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಆರಂಭದಲ್ಲಿ ಅಮೃತದಂತೆ ಕಂಡು ಪರಿಣಾಮದಲ್ಲಿ ವಿಷಸಮಾನವಾಗಿರುವ ಸುಖವು ರಾಜಸವಾದುದೆಂದು ಹೇಳಿದ್ದಾರೆ. ೩೮

ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಂ

ಯಾವದು ಆರಂಭದಲ್ಲಿಯೂ ಪರಿಣಾಮದಲ್ಲಿಯೂ ಆತ್ಮವನ್ನು ಮೂರ್ಛೆಗೊಳಿಸುವುದೊ ಮತ್ತು ನಿದ್ದೆ, ಆಲಸ್ಯ ಮತ್ತು ಪ್ರಮಾದಗಳಿಂದ ಹುಟ್ಟಿದೆಯೊ, ಅದು ತಾಮಸ ಸುಖವೆನಿಸಿಕೊಳ್ಳುತ್ತದೆ. ೩೯

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ

ಪ್ರಕೃತಿಯಲ್ಲಿ ಹುಟ್ಟಿದ ಈ ಮೂರು ಗುಣಗಳಿಂದ ಬಿಡುಗಡೆ ಹೊಂದಿರುವವನು ಪೃಥ್ವಿಯಲ್ಲಾಗಲಿ ದೇವತೆಗಳೊಳಗಾಗಲಿ ಸ್ವರ್ಗದಲ್ಲಾಗಲಿ ಯಾವನೂ ಇಲ್ಲ. ೪೦

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ

ಎಲೈ ಪರಂತಪನೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಕರ್ಮಗಳು ಕೂಡ ಅವರ ಸ್ವಭಾವಜನ್ಯ ಗುಣಗಳ ದೆಸೆ ಯಿಂದ [ಗುಣಗಳಿಸನುಸಾರವಾಗಿ] ವಿಭಾಗಮಾಡಲ್ಪಟ್ಟಿವೆ. ೪೧

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ

ಶಮೆ, ದಮೆ, ತಪಸ್ಸು, ಶುಚಿತ್ವ, ಕ್ಷಮೆ, ಸರಳತೆ, ಜ್ಞಾನ, ಅನುಭವ, ಆಸ್ತಿಕತೆ--ಇವು ಬ್ರಾಹ್ಮಣನ ಸ್ವಭಾವಜನ್ಯ ಕರ್ಮಗಳು.
೪೨

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ

ಶೌರ್ಯ, ತೇಜಸ್ಸು, ಧೃತಿ, ದಕ್ಷತೆ, ಯುದ್ಧದಲ್ಲಿ ಬೆನ್ನು ತೋರಿಸದಿರುವದು, ದಾನ, ಶಾಸನ [ಆಳುವದು], ಇವು ಕ್ಷತ್ರಿಯನ ಸ್ವಭಾವಜನ್ಯ ಕರ್ಮಗಳು. ೪೩

ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ

ಆರಂಬ, ಗೋರಕ್ಷಣೆ, ವ್ಯಾಪಾರ, ಇವು ವೈಶ್ಯನ ಸ್ವಭಾವ ಜನ್ಯ ಕರ್ಮಗಳು. ಮತ್ತು, ಸೇವೆಯು ಶೂದ್ರನ ಸ್ವಭಾವಜನ್ಯ ಕರ್ಮವು. ೪೪

ಸ್ವೇ ಸ್ವೇ ಕರ್ಮಣ ಭಿರತಃ ಸಂಸಿದ್ಧಿಂ ಲಭತೇ ನರಃ
ಸ್ವಕರ್ಮನಿರತಂ ಸಿದ್ಧಿಂ ಯಥಾ ವಿಂದತಿ ತಚ್ಛೃಣು

ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾದ ಮನುಷ್ಯರು ಮೋಕ್ಷ ವನ್ನು ಪಡೆಯುತ್ತಾರೆ. ತನ್ನ ಕರ್ಮದಲ್ಲಿ ನಿರತನಾದ ಮನುಷ್ಯನು ಯಾವ ರೀತಿ ಮೋಕ್ಷ ಪಡೆಯುವನೆಂಬುದನ್ನು ಕೇಳು. ೪೫

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ

ಯಾರ ಮೂಲಕ ಪ್ರಾಣಿಗಳ ಪ್ರವೃತ್ತಿಯುಂಟಾಗುತ್ತದೆಯೊ ಮತ್ತು ಯಾರಿಂದ ಸಮಸ್ತವೂ ವ್ಯಾಪ್ತವಾಗಿದೆಯೊ, ಅವನನ್ನು ತನ್ನ ಕರ್ಮದಿಂದ ಭಜಿಸುವ ಮನುಷ್ಯನು ಮೋಕ್ಷವನ್ನೈದುತ್ತಾನೆ. ೪೬

ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ

ಪರಧರ್ಮವು ಸುಕರವಾಗಿದ್ದರೂ ವಿಗುಣವಾದ ಪರಧರ್ಮವು ಅದಕ್ಕಿಂತ ಉತ್ತಮವು. ಸ್ವಭಾವಕ್ಕನುರೂಪವಾದ ಕರ್ಮಗೈವ ಮನುಷ್ಯನಿಗೆ ಪಾಪವು ತಟ್ಟುವದಿಲ್ಲ. ೪೭

ಟಿಪ್ಪಣಿ—ಸ್ವಧರ್ಮವೆಂದರೆ ತನ್ನ ಕರ್ತವ್ಯ. ಗೀತೆಯ ಶಿಕ್ಷಣದ ಮಧ್ಯಬಿಂದುವು ಕರ್ಮಫಲತ್ಯಾಗ, ಮತ್ತು ಸ್ವಕರ್ಮಕ್ಕಿಂತ ಹೆಚ್ಚು ಉತ್ತಮವಾದ ಕರ್ತವ್ಯವನ್ನರಸಿದರೆ ಫಲತ್ಯಾಗಕ್ಕೆ ಎಡೆಯಿರುವದಿಲ್ಲ. ಆದುದರಿಂದ ಸ್ವಧರ್ಮವು ಶ್ರೇಷ್ಠವೆಂದು ಹೇಳಲ್ಪಟ್ಟಿದೆ. ಎಲ್ಲಾ ಧರ್ಮಗಳ ಫಲವೂ ಅವುಗಳ ಪಾಲನೆಯಲ್ಲೇ ದೊರಕುತ್ತದೆ.

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ

ಹೇ ಕೌಂತೇಯ, ಸಹಜವಾಗಿ ಪ್ರಾಪ್ತವಾದ ಧರ್ಮವನ್ನು, ಅದರಲ್ಲಿ ದೋಷವಿದ್ದರೂ, ಬಿಡಬಾರದು. ಬೆಂಕಿಯೊಡನೆ ಹೊಗೆಯಿರುವಂತೆಯೇ ಎಲ್ಲಾ ಕೆಲಸಗಳೊಡನೆ ದೋಷ [ವಿದ್ದೇ] ಇರುತ್ತದೆ. ೪೮

ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ

ಎಲ್ಲಾ ಕಡೆಯಿಂದಲೂ ಆಸಕ್ತಿಯನ್ನು ಸೆಳೆದುಕೊಂಡಿರುವ, ಕಾಮನೆಗಳನ್ನು ತ್ಯಜಿಸಿಬಿಟ್ಟಿರುವ, ಮನಸ್ಸನ್ನು ಗೆದ್ದಿರುವ, ಮನು

ಷ್ಯನು ಸಂನ್ಯಾಸದ ಮೂಲಕ ನೈಷ್ಕರ್ಮ್ಯವೆಂಬ ಸಿದ್ಧಿಯನ್ನು ಪಡೆಯುತ್ತಾನೆ. ೪೯

ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ

ಎಲೈ ಕೌಂತೇಯನೆ, ಸಿದ್ಧಿಯನ್ನೈದಿದ ಮೇಲೆ ಮನುಷ್ಯನು ಬ್ರಹ್ಮವನ್ನು ಪಡೆಯುವದೆಂತೆಂಬುದನ್ನು ನನ್ನಿಂದ ಸಂಕ್ಷೇಪವಾಗಿ ಕೇಳು. ಅದೇ ಜ್ಞಾನದ ಪರಾಕಾಷ್ಠ ದಶೆ. ೫೦

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ

ಯಾರ ಬುದ್ಧಿಯು [ಪರಿ]ಶುದ್ಧವಾಗಿಬಿಟ್ಟಿದೆಯೊ ಅಂತಹ ಯೋಗಿಯು ದೃಢತೆಯಿಂದ ತನ್ನನ್ನು ವಶಮಾಡಿಕೊಂಡು, ಶಬ್ದವೇ ಮುಂತಾದ ವಿಷಯಗಳನ್ನು ತ್ಯಾಗಮಾಡಿ, ರಾಗದ್ವೇಷಗಳನ್ನು ಗೆದ್ದು, ಏಕಾಂತವನ್ನು ಸೇವನೆಮಾಡಿ, ಅಲ್ಪಾಹಾರಿಯಾಗಿ, ಮಾತನ್ನೂ ಶರೀರವನ್ನೂ ಮನಸ್ಸನ್ನೂ ಅಂಕೆಯಲ್ಲಿಟ್ಟುಕೊಂಡು, ಧ್ಯಾನಯೋಗದಲ್ಲಿ ನಿತ್ಯಪರಾಯಣನಾಗಿದ್ದು, ವೈರಾಗ್ಯವನ್ನಾಶ್ರಯಿಸಿ, ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ ಮತ್ತು ಪರಿಗ್ರಹ, ಇವುಗಳನ್ನು ಬಿಟ್ಟು, ಮಮತಾರಹಿತನೂ ಶಾಂತನೂ ಆಗಿ ಬ್ರಹ್ಮಭಾವವನ್ನು ಪಡೆಯಲು ಯೋಗ್ಯನಾಗುತ್ತಾನೆ. ೫೧-೫೩

ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ

ಬ್ರಹ್ಮಭಾವವನ್ನೈದಿದ, ಪ್ರಸನ್ನಚಿತ್ತನಾದ, ಮನುಷ್ಯನು ಶೋಕಪಡುವದೂ ಇಲ್ಲ, ಏನನ್ನೂ ಬಯಸುವದೂ ಇಲ್ಲ. ಅವನು ಸಕ

ಲಭೂತಗಳಲ್ಲಿಯೂ ಸಮಭಾವವನ್ನಿಟ್ಟು ನನ್ನಲ್ಲಿ ಪರಮಭಕ್ತಿಯನ್ನು ಪಡೆಯುತ್ತಾನೆ. ೫೪

ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ

ನಾನು ಎಂತಹನು, ಯಾರು, ಎಂಬುದನ್ನು ಭಕ್ತಿಯ ಮೂಲಕ ಅವನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆ ಮತ್ತು ಹೀಗೆ ನನ್ನನ್ನು ಯಥಾರ್ಥವಾಗಿ ಅರಿತು ನನ್ನಲ್ಲಿ ಪ್ರವೇಶಿಸುತ್ತಾನೆ. ೫೫

ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ

ನನ್ನನ್ನಾಶ್ರಯಿಸುವವನು ಸದಾ ಎಲ್ಲಾ ಕರ್ಮಗಳನ್ನೂ ಮಾಡುತ್ತಿದ್ದರೂ ನನ್ನ ಕೃಪೆಯಿಂದ ಶಾಶ್ವತವಾದ ಅವ್ಯಯ ಪದವನ್ನೈದುತ್ತಾನೆ. ೫೬

ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ

ಮನಃಪೂರ್ವಕವಾಗಿ ಎಲ್ಲಾ ಕರ್ಮಗಳನ್ನೂ ನನಲ್ಲಿ ಅರ್ಪಣ ಮಾಡಿ, ನನ್ನಲ್ಲಿ ಪರಾಯಣನಾಗಿ, ವಿವೇಕಬುದ್ಧಿಯನ್ನಾಶ್ರಯಿಸಿ, ನಿರಂತರವೂ ನನ್ನಲ್ಲಿ ಚಿತ್ತವಿಡು. ೫೭

ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ
ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ

ನನ್ನಲ್ಲಿ ಚಿತ್ತವಿಟ್ಟಮೇಲೆ ಎಲ್ಲಾ ಕಷ್ಟಗಳೆಂಬ ಬೆಟ್ಟಗಳನ್ನೂ ನನ್ನ ಕೃಪೆಯಿಂದ ಪಾರಾಗುವೆ. ಆದರೆ [ನೀನು] ಅಹಂಕಾರವಶನಾಗಿ ನನ್ನ [ಮಾತನ್ನು] ಕೇಳದಿದ್ದರೆ ನಾಶವನ್ನೈದುವೆ. ೫೮

ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ

ನೀನು ಅಹಂಕಾರವಶನಾಗಿ 'ನಾನು ಯುದ್ಧ ಮಾಡುವದಿಲ್ಲ' ಎಂದು ಎಣಿಸಿದರೆ, ಈ ನಿನ್ನ ನಿಶ್ಚಯವು ಮಿಥ್ಯವಾದುದು. ನಿನ್ನ ಸ್ವಭಾವವೇ ನಿನ್ನನ್ನು ಆ ಕಡೆಗೆ ಬಲಾತ್ಕಾರದಿಂದ ಸೆಳೆದೊಯ್ಯುವುದು. ೫೯

ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ
ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್

ಹೇ ಕೌಂತೇಯ, ಸ್ವಭಾವಜನ್ಯವಾದ ನಿನ್ನ ಕರ್ಮದಿಂದ ಬದ್ಧನಾಗಿರುವ ಕಾರಣ ನೀನು ಯಾವದನ್ನು ಮೋಹವಶನಾಗಿ ಮಾಡಲೆಳಸುವದಿಲ್ಲವೊ ಅದನ್ನು ನಿರುಪಾಯನಾಗಿ ಮಾಡುವೆ. ೬೦

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ
ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ

ಎಲೈ ಅರ್ಜುನನೆ, ಈಶ್ವರನು ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ವಾಸಿಸುತ್ತಾನೆ ಮತ್ತು ತನ್ನ ಮಾಯೆಯ ಬಲದಿಂದ ಕುಂಬಾರನ ಚಕ್ರದ ಮೇಲಿರುವ ಗಡಿಗೆಯಂತೆ ಅವುಗಳನ್ನು ಸುತ್ತ ಸುತ್ತಲೂ ತಿರುಗಿಸುತ್ತಾನೆ. ೬೧

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ

ಹೇ ಭಾರತ, ನೀನು ಸರ್ವಭಾವದಿಂದ ಅವನನ್ನು ಶರಣುಹೊಗು. ಅವನ ಕೃಪೆಯಿಂದ ಪರಮಶಾಂತಿಮಯವಾದ ಅಮರ ಪದವನ್ನು ಪಡೆಯುವೆ. ೬೨

ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು

ಈ ರೀತಿಯಾಗಿ ಅತ್ಯಂತ ಗೂಢವಾದ ಜ್ಞಾನವನ್ನು ನಾನು ನಿನಗೆ ತಿಳಿಸಿರುವೆನು. ಇದೆಲ್ಲವನ್ನೂ ಚೆನ್ನಾಗಿ ಪರ್ಯಾಲೋಚಿಸಿ ನಿನಗೆ ಸರಿದೋರಿದಂತೆ ಮಾಡು. ೬೩

ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ
ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ

ಮತ್ತು ಎಲ್ಲಕ್ಕಿಂತ ಗೂಢವಾದ ನನ್ನ ಪರಮ ವಚನವನ್ನು ಕೇಳು. ನೀನು ನನಗೆ ಬಹು ಪ್ರಿಯನಾದುದರಿಂದ ನಿನಗೆ ನಿನ್ನ ಹಿತ [ದ ವಿಷಯ] ವನ್ನು ಹೇಳುವೆನು. ೬೪

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ

ನನ್ನೊಡನೆ ಸೇರಿದವನಾಗು, ನನ್ನ ಭಕ್ತನಾಗು, ನನಗೋಸ್ಕರ ಯಜ್ಞ ಮಾಡು, ನನಗೆ ವಂದನೆಮಾಡು. ನೀನು ನನ್ನನ್ನೇ ಪಡೆಯುವೆ, ಇದು ನನ್ನ ಸತ್ಯಪ್ರತಿಜ್ಞೆ. ನೀನು ನನಗೆ ಪ್ರಿಯನು. ೬೫

ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ

ಎಲ್ಲಾ ಧರ್ಮಗಳನ್ನು ತ್ಯಾಗಮಾಡಿ ನನ್ನೊಬ್ಬನನ್ನೇ ಶರಣು ಹೊಗು. ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಮುಕ್ತನನ್ನಾಗಿ ಮಾಡುವೆನು. ಶೋಕಿಸಬೇಡ. ೬೬

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ

ಯಾರು ತಪಸ್ವಿಯಲ್ಲವೊ, ಯಾರು ಭಕ್ತನಲ್ಲವೊ, ಯಾರು ಕೇಳಬಯಸುವದಿಲ್ಲವೊ ಮತ್ತು ಯಾರು ನನ್ನನ್ನು ದ್ವೇಷಿಸುತ್ತಾನೊ, ಅವನಿಗೆ ಈ (ಜ್ಞಾನವನ್ನು) ನೀನು ಎಂದಿಗೂ ಹೇಳಕೂಡದು. ೬೭

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ

ಪರಂತು ಈ ಪರಮಗೂಢಜ್ಞಾನವನ್ನು ನನ್ನ ಭಕ್ತರಿಗೆ ಕೊಡುವವನು ನನ್ನಲ್ಲಿ ಪರಮಭಕ್ತಿಗೈವುದರಿಂದ ನಿಸ್ಸಂದೇಹವಾಗಿ ನನ್ನನ್ನೇ ಪಡೆಯುವನು. ೬೮

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ

ಅವನಿಗಿಂತ ಮನುಷ್ಯರಲ್ಲಿ ಯಾವನೂ ನನಗೆ ಹೆಚ್ಚು ಪ್ರಿಯ ಸೇವಕನಲ್ಲ ಮತ್ತು ಈ ಪೃಥ್ವಿಯಲ್ಲಿ ನನಗೆ ಅವನಿಗಿಂತ ಯಾವನೂ ಹೆಚ್ಚು ಪ್ರಿಯನಾಗಿರುವವನೂ ಇಲ್ಲ. ೬೯

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ

ನಮ್ಮ ಈ ಧಾರ್ಮಿಕ ಸಂವಾದವನ್ನು ಯಾರು ಅಭ್ಯಾಸ ಮಾಡುವನೊ ಅವನು ನನ್ನನ್ನು ಜ್ಞಾನಯಜ್ಞದ ಮೂಲಕ ಭಜಿಸು ವನೆಂಬುದು ನನ್ನ ಮತ. ೭೦

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ
ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ

ಮತ್ತು ದ್ವೇಷರಹಿತನಾಗಿ ಶ್ರದ್ಧಾಪೂರ್ವಕವಾಗಿ [ಇದನ್ನು] ಕೇವಲ ಕೇಳುವ ಮನುಷ್ಯನು ಕೂಡ ಮುಕ್ತನಾಗಿ ಪುಣ್ಯವಂತರು ವಾಸಿಸುವ ಶುಭಲೋಕವನ್ನು ಪಡೆಯುತ್ತಾನೆ ೭೧

**ಟಿಪ್ಪಣಿ**—ಇದರ ತಾತ್ಪರ್ಯವೇನೆಂದರೆ ಈ ಜ್ಞಾನವನ್ನು ಅನುಭವ ಮಾಡಿರುವವನು ಮಾತ್ರವೇ ಇದನ್ನು ಎರಡನೆಯವನಿಗೆ ಕೊಡಬಲ್ಲನು. ಈ ಎರಡು ಪದಗಳು ಶುದ್ಧ ಉಚ್ಚಾರಣೆಯನ್ನು ಮಾಡಿ ಅರ್ಥಸಹಿತವಾಗಿ ಹೇಳಿ ಬಿಡುವವರನ್ನು ಕುರಿತವುಗಳಲ್ಲ.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ**
**ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ**

ಎಲೈ ಪಾರ್ಥನೆ, ಇದನ್ನು ನೀನು ಏಕಾಗ್ರಚಿತ್ತದಿಂದ ಕೇಳಿದೆಯೋ? ಹೇ ಧನಂಜಯ, ಈ ಅಜ್ಞಾನದಿಂದ ನಿನಗುಂಟಾಗಿದ್ದ ಮೋಹವು ನಷ್ಟವಾಯಿತೋ? ೭೨

ಅರ್ಜುನ ಉವಾಚ—

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ

ಅರ್ಜುನನೆಂದನು—

ಹೇ ಅಚ್ಯುತ, ನಿನ್ನ ಕೃಪೆಯಿಂದ ನನ್ನ ಮೋಹವು ಕಳೆದು ಹೋಯಿತು. ನನಗೆ ಎಚ್ಚರಿಕೆಯು ಬಂದಿತು. ಸಂದೇಹವು ಸಮಾಧಾನವಾದುದರಿಂದ ನಾನು ಸ್ವಸ್ಥನಾಗಿದ್ದೇನೆ. ನೀನು ಹೇಳಿದಂತೆ ಮಾಡುವೆನು. ೭೩

ಸಂಜಯ ಉವಾಚ—

ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ
ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್

ಸಂಜಯನು ಹೇಳಿದನು—

ಈ ಪ್ರಕಾರವಾಗಿ ವಾಸುದೇವನ ಮತ್ತು ಮಹಾತ್ಮನಾದ ಅರ್ಜುನನ [ಮಧ್ಯೆ ನಡೆದ] ಈ ರೋಮಾಂಚವನ್ನುಂಟುಮಾಡುವ ಇಂತಹ ಅದ್ಭುತ ಸಂವಾದವನ್ನು ನಾನು ಕೇಳಿದೆನು. ೭೪

ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಂ
ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಂ

ವ್ಯಾಸರ ಕೃಪೆಯಿಂದ ಯೋಗೇಶ್ವರ ಕೃಷ್ಣನ ಶುಭಮುಖದಿಂದ ನಾನು ಈ ಗೂಢವಾದ ಪರಮಯೋಗವನ್ನು ಕೇಳಿದೆನು. ೭೫

ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಂ
ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ

ಎಲೈ ರಾಜನೆ ಕೇಶವ ಮತ್ತು ಅರ್ಜುನರ ಈ ಅದ್ಭುತ ಮತ್ತು ಪವಿತ್ರ ಸಂವಾದವನ್ನು ನೆನೆದು ನೆನೆದು ನಾನು ಬಾರಿಬಾರಿಗೂ ಆನಂದಗೊಳ್ಳುತ್ತಿರುವೆನು. ೭೬

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ
ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃಪುನಃ

ಎಲೈ ರಾಜನೆ, ಹರಿಯ ಆ ಅದ್ಭುತರೂಪವನ್ನು ಸ್ಮರಿಸಿ ಸ್ಮರಿಸಿ ನಾನು ಅಚ್ಚರಿಗೊಳ್ಳುತ್ತೇನೆ. ಮತ್ತು ಪುನಃ ಪುನಃ ಆನಂದಹೊಂದುತ್ತಿದ್ದೇನೆ. ೭೭

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ

ಎಲ್ಲಿ ಯೋಗೇಶ್ವರ ಕೃಷ್ಣನಿರುವನೊ, ಎಲ್ಲಿ ಧನುರ್ಧಾರಿಯಾದ ಪಾರ್ಥನಿರುವನೊ, ಅಲ್ಲಿಯೇ ಸಿರಿಯುಂಟು, ವಿಜಯವುಂಟು, ವೈಭವವುಂಟು, ಮತ್ತು ಅವಿಚಲವಾದ ನೀತಿಯುಂಟೆಂದು ನನ್ನ ಅಭಿಪ್ರಾಯ. ೭೮

ಟಿಪ್ಪಣಿ—ಯೋಗೇಶ್ವರ ಕೃಷ್ಣನೆಂದರೆ ಅನುಭವಸಿದ್ಧವಾದ ಶುದ್ಧ ಜ್ಞಾನವೆಂದು ತಾತ್ಪರ್ಯ ಮತ್ತು ಧನುರ್ಧಾರಿಯಾದ ಅರ್ಜುನನೆಂದರೆ ತದನುಸಾರವಾದ ಕ್ರಿಯೆಯೆಂದರ್ಥ. ಇವೆರಡೂ ಕೂಡಿರುವ ಕಡೆ ಸಂಜಯನು ಹೇಳಿರುವದಲ್ಲದೆ ಬೇರೆ ಯಾವ ಪರಿಣಾಮವುಂಟಾಗಬಲ್ಲದು ?

## ಓಂ ತತ್ಸತ್

ಈ ಪ್ರಕಾರವಾಗಿ ಶ್ರೀಮದ್ಭಗವದ್ಗೀತೆಯೆಂಬ ಉಪನಿಷತ್ ಅಥವಾ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನ ಸಂವಾದದ ಸಂನ್ಯಾಸಯೋಗವೆಂಬ ಹದಿನೆಂಟನೆಯ ಅಧ್ಯಾಯುವು ಸಮಾಪ್ತವಾದುದು.

## ಓಂ ಶಾಂತಿಃ

# ಭಗವದ್ಗೀತಾ ಅಥವಾ ಅನಾಸಕ್ತಿಯೋಗ



ನಾನು ಗೀತೆಯನ್ನೋದುತ್ತಾ, ಮನನ ಮಾಡುತ್ತಾ ಮತ್ತು ಅದನ್ನನುಸರಿಸುತ್ತಾ ಇಂದಿಗೆ ನಾಲ್ವತ್ತು ವರ್ಷಕ್ಕೆ ಮೇಲೆ ಆಯಿತು. ಇದನ್ನು ನಾನು ಯಾವ ರೀತಿ ತಿಳಿದುಕೊಂಡಿರುವೆನೆಂಬುದನ್ನು ನಾನು ಗುಜರಾತಿಗಳಿಗೆ ತಿಳಿಸಬೇಕೆಂದು [ನನ್ನ] ಮಿತ್ರರು ಇಚ್ಛೆಪಟ್ಟರು. ನಾನು ಅದನ್ನು [ಗೀತೆಯನ್ನು] ಅನುವಾದಿಸಿದೆನು ಅನುವಾದ ಮಾಡಲು ನನ್ನ ಯೋಗ್ಯತೆಯನ್ನು ವಿದ್ವಾಂಸರ ದೃಷ್ಟಿಯಿಂದ ನೋಡತೊಡಗಿದರೆ ಏನೂ ಇಲ್ಲವೆಂದು ಹೇಳಬೇಕಾಗುವುದು; ಆಚರಣೆಯ ದೃಷ್ಟಿಯಿಂದ ಅಷ್ಟು ಇಷ್ಟು ಇದೆಯೆಂದು ಎಣಿಸಬಹುದು. ಈ ಅನುವಾದವು ಈಗ ಮುದ್ರಿತವಾಗಿದೆ. ಅನೇಕ ಗೀತೆ[ಯ ಅನುವಾದ]ಗಳೊಡನೆ ಸಂಸ್ಕೃತ [ಮೂಲ]ವೂ ಇರುತ್ತದೆ—ಇದರಲ್ಲಿ ತಿಳಿದೂ ತಿಳಿದೂ ಸಂಸ್ಕೃತವನ್ನು ಕೊಟ್ಟಿಲ್ಲ. ಸಂಸ್ಕೃತವನ್ನು ಎಲ್ಲರೂ ಅರಿತರೇನೋ ನನಗೆ ಸಂತೋಷ[ವೇ]. ಆದರೆ ಸಂಸ್ಕೃತವು ಎಂದಿಗೂ ಎಲ್ಲರೂ ಕಲಿಯುವಂತಹುದಲ್ಲ. ಎರಡನೆಯದಾಗಿ, ಸಂಸ್ಕೃತದಲ್ಲಿ ಬಹು ಅಗ್ಗವಾದ ಸಂಸ್ಕರಣಗಳು ದೊರೆಯುತ್ತವೆ. ಆದುದರಿಂದ ಸಂಸ್ಕೃತವನ್ನು ಬಿಟ್ಟು ಗಾತ್ರವನ್ನೂ ಬೆಲೆಯನ್ನೂ ಕಡಿಮೆ ಮಾಡಬೇಕೆಂದು ನಿಶ್ಚಯಿಸಲಾಯಿತು. [ಇದರಲ್ಲಿ] ೧೯ ಪುಟದ ಪ್ರಸ್ತಾವನೆಯೂ ೧೮೭ ಪುಟಗಳ ಭಾಷಾಂತರವೂ ಇದೆ. ಕಿಸೆಯಲ್ಲಿಡಲು ಯೋಗ್ಯವಾದ ೧೦,೦೦೦ ಪ್ರತಿಗಳು ಅಚ್ಚಾಗಿವೆ ಇದರ ಬೆಲೆಯು ಎರಡಾಣೆ. ಪ್ರತಿಯೊಬ್ಬ ಗುಜರಾತಿಯೂ ಈ ಗೀತೆಯನ್ನೋದಲಿ, ವಿಚಾರಮಾಡಲಿ ಮತ್ತು ಅದನ್ನನುಸರಿಸಲಿ ಎಂಬದಾಗಿ ನನಗೆ ಆಸೆಯಿದೆ. ಇದನ್ನು [ಈ ಗೀತೆಯ ಅನುವಾದವನ್ನು] ವಿಚಾರಮಾಡಲು ಸಹಜ ಉಪಾಯವೇನೆಂದರೆ, ಸಂಸ್ಕೃತ

[ಮೂಲ]ದ ಮೇಲೆ ಗಮನವಿಡದೆಯೇ ಅದರೊಳಗಿನ ಅರ್ಥವನ್ನು ಗ್ರಹಿಸಲು ಪ್ರಯತ್ನಪಡುವದು ಮತ್ತು ಆಮೇಲೆ ಅದನ್ನನುಸರಿಸುವದು. ಹೇಗೆಂದರೆ, ಗೀತೆಯು ಸ್ವಜನರು-ಇತರರು ಎಂಬ ಭೇದವನ್ನಿಡದೆ ದುಷ್ಟರ ಸಂಹಾರವನ್ನು ಮಾಡುವದನ್ನು ಕಲಿಸುತ್ತದೆ ಎಂದು ಅರ್ಥ ಮಾಡುವವರು ತಮ್ಮ ದುಷ್ಟರಾದ ತಂದೆತಾಯಿಗಳನ್ನೋ ಇತರ ಪ್ರಿಯ ಜನರನ್ನೋ ಸಂಹಾರ ಮಾಡುವದರಲ್ಲಿ ತೊಡಗಬೇಕು. ಆದರೆ ಅವರು ಹೀಗಂತು ಮಾಡಲಾರರು. ಸಂಹರಿಸುವ ವಿಷಯವು ಬಂದ ಕಡೆ ಇನ್ನಾವದೋ ಬೇರೆ ರೀತಿಯ ಸಂಹಾರವಿರುವ ಸಂಭವವುಂಟೆಂದು ಸಹಜವಾಗಿ ಓದುವವರ ಗಮನಕ್ಕೆ ಬರುವುದು. ಸ್ವಜನರು-ಇತರರು ಎಂಬ ಭೇದವನ್ನಿಡಕೂಡದೆಂಬ ವಿಷಯವು ಗೀತೆಯಲ್ಲಿ ಹಾಳೆ ಹಾಳೆಯಲ್ಲಿಯೂ [ಕಾಣ] ಬರುತ್ತದೆ. ಇದು ಆಗಬಲ್ಲದೆಂತು? ಈ ರೀತಿಯಾಗಿ ಯೋಚನೆ ಮಾಡುತ್ತಾ ಮಾಡುತ್ತಾ ನಾವು ಈ ಅರ್ಥವನ್ನು ಮುಟ್ಟುತ್ತೇವೆ—ಅನಾಸಕ್ತಿಯಿಂದ ಎಲ್ಲಾ ಕೆಲಸಗಳನ್ನೂ ಮಾಡಬೇಕೆಂಬುದು ಗೀತೆಯ ಧ್ವನಿ. ಏಕೆಂದರೆ ಮೊದಲನೆಯ ಅಧ್ಯಾಯದಲ್ಲಿಯೇ ಅರ್ಜುನನ ಮುಂದೆ ಸ್ವಜನ-ಪರಜನ ಜಗಳವು ಎದ್ದು ನಿಲ್ಲುತ್ತದೆ. ಇಂತಹ ಭೇದವು ಮಿಥ್ಯವಾದುದು, ಹಾನಿಕಾರಕವಾದುದು ಎಂಬುದನ್ನು ಗೀತೆಯು ಪ್ರತಿಯೊಂದು ಅಧ್ಯಾಯದಲ್ಲಿಯೂ ನಿರೂಪಿಸುತ್ತದೆ. ಗೀತೆಗೆ ನಾನು ಅನಾಸಕ್ತಿಯೋಗವೆಂಬ ಹೆಸರನ್ನು ಕೊಟ್ಟಿದ್ದೇನೆ. ಇದು ಏನು, ಇದನ್ನು ಕಲಿಯಲಾಗುವದೆಂತು, ಅನಾಸಕ್ತಿಯ ಲಕ್ಷಣಗಳಾವುವು; ಇದೆಲ್ಲವನ್ನೂ ಮೇಲೆ ಹೇಳಿದ ಪುಸ್ತಕದೊಳಗಿಂದ ಕಲಿಯಲಿಚ್ಛಿಸುವವರು ಕಲಿಯಬಲ್ಲರು. ಗೀತೆಯನ್ನನುಸರಿಸುತ್ತಾ ನಾನು ಈ ಯುದ್ಧ[೧]ವನ್ನಾರಂಭಿಸದೆ ಇರಲಾಗ

---

೧ ಗಾಂಧೀಜಿಯವರು ಸಮುದ್ರದ ತೀರದಲ್ಲಿರುವ ದಾಂಡಿ ಎಂಬ ಸ್ಥಳದಲ್ಲಿ ಉಪ್ಪಿನ ಕಾಯಿದೆಯನ್ನು ಭಂಗಗೊಳಿಸಲೋಸುಗ ತಮ್ಮ ಸತ್ಯಾಗ್ರಹಾಶ್ರಮದಿಂದ ೧೯೩೦ನೇ ಮಾರ್ಚ ೧೨ರಲ್ಲಿ ವಿಜಯಯಾತ್ರೆ ಹೊರಟು ಭಾರತದ ಸ್ವರಾಜ್ಯಸಾಧನೆಗಾಗಿ ಸತ್ಯಾಗ್ರಹ ಯುದ್ಧವನ್ನು ಆರಂಭಿಸಿದರು. ಧಾರಶನಾದಲ್ಲಿರುವ ಉಪ್ಪಿನ

ಲಿಲ್ಲ. ಮಿತ್ರರೊಬ್ಬರು ತಾರು ಕಳಿಸಿರುವಂತೆ ಇದು ಧರ್ಮಯುದ್ಧ. ಮತ್ತು ಆದರ ಕಡೆಯ ತೀರ್ಮಾನದ ಹೊತ್ತಿಗೆ ಸರಿಯಾಗಿ ಈ ಪುಸ್ತಕವು ಹೊರಬಿದ್ದಿರುವದು ನನಗೊಂದು ಶುಭ ಶಕುನ. ಈ ಲೇಖನವು ಅನಾಸಕ್ತಿಯೋಗದ ಗುಜರಾತೀ ಸಂಸ್ಕರಣಕ್ಕಾಗಿ ಬರೆಯಲ್ಪಟ್ಟಿತು. ಆದರ ಹಿಂದೀ ಅನುವಾದವೇ ತಮ್ಮ ಕೈಯಲ್ಲಿದೆ.

ಮೋಹನದಾಸ ಕರ್ಮಚಂದ ಗಾಂಧೀ

---

ಕೋಠಿಗೆ ಹೋಗುತ್ತಾ ದಾರಿಯಲ್ಲಿ ಕರಾಡವೆಂಬ ಊರಿನಲ್ಲಿ ಅವರು ತಂಗಿರುವಾಗ ಮೇ ೫ರಲ್ಲಿ ಅವರ ದಸ್ತಗಿರಿಯಾಗಿ ಗಾಂಧೀಜಿಯವರು ಪುನಃ ಯರವಾಡಾ ಕಾರಾಗೃಹದಲ್ಲಿ ಕೈದಿಗಳಾದರು. ಗುಜರಾತಿ ಅನಾಸಕ್ತಿಯೋಗವು ಅವರ ದಸ್ತಗಿರಿಯಾಗುವ ಹೊತ್ತಿಗೆ ಸರಿಯಾಗಿ ಪ್ರಕಟವಾಯಿತು.

